ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು:

**ತ.ಸು. ಶಾಮರಾಯ**, ಎಂ.ಎ.,
Lecturer in Kannada
First Grade College, MYSORE

**ಎಚ್.ಎಂ. ಶಂಕರನಾರಾಯಣ ರಾವ್**, ಎಂ.ಎ.,
Head of the Department of Kannada,
Sarada Vilas College, MYSORE.

ಮೊದಲ ಮುದ್ರಣ : ೧೯೫೧

**Checked 1965**

ಬೆಲೆ : ಸಾಧಾರಣ ಪ್ರತಿ — ಎರಡು ರೂಪಾಯಿ
ಕ್ಯಾಲಿಕೋ — ಮೂರು ರೂಪಾಯಿ



ಅಚ್ಚಿಟ್ಟವರು :
ಪಿ.ಆರ್. ಸೀತಾರಾಂ, ಬಿ.ಎಸ್ಸಿ.,
ಶ್ರೀ ಸೀತಾರಾಘವ ಪ್ರೆಸ್, ಮೈಸೂರು

# ಮುನ್ನುಡಿ

ಕನ್ನಡ ಗದುಗಿನ ಭಾರತ ಅಥವಾ ನಾರಣಪ್ಪನ ಭಾರತ ಬೃಹತ್ತು ಮಹತ್ತುಗಳೆರಡರಲ್ಲಿಯೂ ಅನುಪಮವಾದ ಗ್ರಂಥ. ಅದರ ಮಹತ್ತನ್ನು ಕಂಡು ಮಣಿಯಬೇಕಾದುದೇ. ಆದರೆ ಅದರ ಬೃಹತ್ತನ್ನು ಕಂಡರೆ ಬೆದರಿಕೆಯಾಗುತ್ತದೆ. ಕಾವ್ಯ ಹುಟ್ಟಿ ಐದು ಶತಮಾನಗಳ ಮೇಲಾಗಿದೆ. ಅಂದಿಗೂ ಇಂದಿಗೂ ಜನರ ಸಾಹಿತ್ಯಾಭಿರುಚಿಯಲ್ಲಿ ಅಜಗಜಾಂತರ ವ್ಯತ್ಯಾಸ ಕಂಡುಬರುವುದರಿಂದ ಈ ಬೃಹತ್ಕಾವ್ಯವನ್ನು ಸಂಗ್ರಹಿಸಿ ಕೊಡುವುದು ಈಗ ಮೊದಲು ನಡೆಯಬೇಕಾದ ಕೆಲಸವಾಗಿದೆ. ಈ ಉದ್ದೇಶದಿಂದಲೇ ಈ ಸಂಗ್ರಹ ಕಾರ್ಯವನ್ನು ನಾವು ಕೈಗೊಂಡಿರುತ್ತೇವೆ. ಕನ್ನಡ ಮಹಾಭಾರತದ ಕಥಾಸರಣಿ ಕೆಡದಂತೆ, ಒಟ್ಟು ಕಥೆಯ ಸ್ವಾರಸ್ಯಕ್ಕೆ, ಪಾತ್ರನಿರೂಪಣಕ್ಕೆ ಭಂಗ ಬಾರದಂತೆ, ಅವಶ್ಯವಾದ ವರ್ಣನೆಯ ಮತ್ತು ವಿವರಣೆಯ ಸಾರ ಬಿಟ್ಟುಹೋಗದಂತೆ, ಎಲ್ಲಕ್ಕೂ ಮಿಗಿಲಾಗಿ ಕವಿಯ ವ್ಯಕ್ತಿತ್ವಕ್ಕೆ ಮತ್ತು ವಿಶೇಷ ಪ್ರತಿಭೆಗೆ ಲೋಪಬಾರದಂತೆ ಈ ಸಂಗ್ರಹ ಕಾರ್ಯವನ್ನು ಮಾಡಬೇಕೆಂಬುದೇ ನಮ್ಮ ಗುರಿ. ಈ 'ವಿರಾಟ ಪರ್ವ ಸಂಗ್ರಹ'ದಲ್ಲಿ ಈ ಗುರಿಯನ್ನು ಬಹುಮಟ್ಟಿಗೆ ಸಾಧಿಸಿರುವೆವೆಂಬ ಭರವಸೆ ನಮಗಿದೆ.

ನಾವು ಕೈಕೊಂಡಿರುವ ಈ ಭಾರತ ಸಂಗ್ರಹ 'ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ'ಯಲ್ಲಿ ಅಚ್ಚಾಗಿ ಪ್ರಕಟವಾಗುವುದು ಉಚಿತವಾಗಿಯೇ ಇದೆ. ಗದುಗಿನ ಭಾರತ ವೆಂಕಣ್ಣಯ್ಯನವರ ಅಚ್ಚುಮೆಚ್ಚಿನ ಗ್ರಂಥ. ಅವರು ಅದನ್ನು

ಅಚ್ಚುಕಟ್ಟಾಗಿ ಪ್ರಕಟಿಸಬೇಕೆಂಬ ಉದ್ದೇಶದಿಂದ ಭಾರತದ ಹಲವಾರು ಓಲೆಯ ಪ್ರತಿಗಳನ್ನು ಸಂಪಾದಿಸಿಟ್ಟಿದ್ದರು; ಭಾರತದ ಕೈ ಬರಹದ ಪ್ರತಿಯೊಂದನ್ನು ತಯಾರಿಸಿಟ್ಟಿದ್ದರು. ಸ್ವಲ್ಪಭಾಗ ಸಂಪಾದನ ಕಾರ್ಯವನ್ನೂ ನಡೆಸಿದ್ದರು. ಅವರು ತಯಾರಿ ಸಿಟ್ಟಿದ್ದ ಕೈ ಬರಹದ ಪ್ರತಿಯಲ್ಲಿ ನಾಲ್ಕು ಪರ್ವಗಳು —ಆದಿ, ಅರಣ್ಯ, ವಿರಾಟ, ಉದ್ಯೋಗ—ಈಗ ದೊರೆತಿವೆ. ಸಭಾ ಪರ್ವದ ಪ್ರತಿ ದೊರಕಲಿಲ್ಲ. ವೆಂಕಣ್ಣಯ್ಯನವರಿಗೆ ಅತ್ಯಂತ ಪ್ರಿಯವಾದ ಈ ಕಾರ್ಯಕ್ಕೆ ಅವರ ಆಶೀರ್ವಾದ ಸಂಪೂರ್ಣವಾಗಿದೆಯೆಂಬುದೇ ನಮ್ಮ ಭಾವನೆ.

ಕುಮಾರವ್ಯಾಸನನ್ನು ಜನಸಾಮಾನ್ಯಕ್ಕೆ ಪರಿಚಯ ಮಾಡಿಕೊಡಲು ಸಿದ್ಧಪಡಿಸಿರುವ ಈ ಸಂಗ್ರಹದಲ್ಲಿ ಪಾಠಾಂತರ ಗಳನ್ನು ಕೊಡುವುದು ಅನವಶ್ಯಕವೆಂದು ಕಂಡುಬಂದ ಕಾರಣ ಅವುಗಳನ್ನು ಇಲ್ಲಿ ಕೊಟ್ಟಿಲ್ಲ. ಈ ಸಂಗ್ರಹವನ್ನು ಸಿದ್ಧಪಡಿ ಸಲು ಹಿಂದಿನ ಸಂಗ್ರಹಗಳ ಪರಿಷ್ಕರಣಕಾರ್ಯದಲ್ಲಿ ಉಪ ಯೋಗಿಸಿಕೊಂಡ ಓಲೆಯ ಪ್ರತಿಗಳನ್ನೇ ಇಲ್ಲಿಯೂ ಉಪಯೋ ಗಿಸಿಕೊಳ್ಳಲಾಯಿತು. ಅವರಲ್ಲಿಯೂ ಮೈಸೂರಿನ ಪ್ರಾಚ್ಯ ಕೋಶಾಗಾರದ ಕೆ. ೨೦೫ನೆಯ ಓಲೆಯ ಪ್ರತಿಯ ಪಾಠವನ್ನೇ ಇಲ್ಲಿಯ ಮೂಲಪಾಠವನ್ನಾಗಿ ಅಂಗೀಕರಿಸಿದೆ.

ಮೈಸೂರಿನ ಪ್ರಾಚ್ಯಕೋಶಾಗಾರದ ಕನ್ನಡಶಾಖೆಯ ವರು ಕುಮಾರವ್ಯಾಸಭಾರತವನ್ನು ಪರ್ವಪರ್ವವಾಗಿ ಪರಿಷ್ಕ ರಿಸಿ ಒಂದೊಂದು ಪರ್ವವನ್ನೂ ಬೇರೆಬೇರೆಯಾಗಿ ಮುದ್ರಿಸಿ ದ್ದಾರೆ. ಅವರ ಆ ಕನ್ನಡ ಗ್ರಂಥಮಾಲೆಯಲ್ಲಿ ವಿರಾಟಪರ್ವ ಐದನೆಯ ಸಂಪುಟವಾಗಿ ೧೯೩೦ರಲ್ಲಿ ಅಚ್ಚಾಯಿತು. ಆರು ಓಲೆಯಪ್ರತಿಗಳ ಸಹಾಯದಿಂದ ಇದು ಪರಿಷ್ಕೃತವಾಗಿ ಮುದ್ರಿ

ತವಾಗಿದ್ದರೂ, ಗ್ರಂಥಪರಿಷ್ಕರಣ ಕ್ರಮವನ್ನು ಇಲ್ಲಿ ನಿರೂಪಿಸಿಲ್ಲ. ಈ ನಮ್ಮ ಸಂಗ್ರಹಕ್ಕೆ ಆ ಗ್ರಂಥವನ್ನೂ ಸಹಾಯವಾಗಿ ಉಪಯೋಗಿಸಿಕೊಳ್ಳಲಾಗಿದೆ. ಆ ಗ್ರಂಥಕ್ಕೂ ನಮ್ಮ ಸಂಗ್ರಹದ ಪಾಠಗಳಿಗೂ ಅನೇಕ ವೇಳೆ ವ್ಯತ್ಯಾಸ ತೋರಬಹುದು. ನಾವು ಇಟ್ಟುಕೊಂಡಿರುವ ಪಾಠಗಳೇ ಹೆಚ್ಚು ಸಮಂಜಸವೆಂದು ತೋರಿಸಲು ಮೂರು ಉದಾಹರಣೆಗಳನ್ನು ಕೊಟ್ಟಿದೆ.

(i) ಪಾಂಡವರು ವಿರಾಟನಗರಿಯ ಬಳಿಗೆ ಬಂದು, ತಮ್ಮ ಆಯುಧಗಳನ್ನೆಲ್ಲ ಹೆಣನಾಕಾರದಲ್ಲಿ ಬಿಗಿದು ಬನ್ನಿಯ ಮರದಮೇಲೆ ಕಟ್ಟಿದರು. ಆಗ ಧರ್ಮರಾಜನು 'ಈ ಅಜ್ಞಾತವಾಸದ ಅವಧಿಯಲ್ಲಿ ಭೀಮನಿಗೆ ಈ ಆಯುಧಗಳನ್ನು ಕೊಡಬೇಡಿ: ಅರ್ಜುನನಿಗೆ ಕೊಡಿ' ಎಂದು ದೇವತೆಗಳನ್ನು ಪ್ರಾರ್ಥಿಸಿದನು. ಆಗ ಕೋಪಗೊಂಡ ಭೀಮನು

ಸುರನಿಕರ ಕಾದಿರಲಿ ಮೇಣೀ
ಧರಣಿ ಕೊಡೆನೆಂದಿರಲಿ ಹಸ್ತಿನ
ಪುರಿಗೆ ದಾಳಿಯನಿಡುವೆನಮರರ ಮೋಜಣಿಗಳ ತಿವಿದು
ಉರುತರಾಸ್ತ್ರವನೊಯ್ವೆ

ನೆಂದು ಆಬ್ಬರಿಸಿದನು. ನಮ್ಮ ಬಳಿಯಿರುವ ಪ್ರತಿಯೊಂದರಲ್ಲಿ 'ಶಕ್ರನಪುರಿಗೆ ದಾಳಿಯನಿಟ್ಟು ದಿವಿಜರ ಮೋಜಣಿಗಳ ತಿವಿದು' ಎಂದಿದೆ. ಧರ್ಮರಾಜನು ಬೇಡಿದ್ದು ಅಷ್ಟದಿಕ್ಪಾಲಕರನ್ನು. ಏಕೆಂದರೆ ಆಯುಧಗಳ ಸಂರಕ್ಷಕರು ಅವರು. ಆದ್ದರಿಂದ ಶಕ್ರನಪುರಿಗೆ ದಾಳಿಯಿಟ್ಟು ಅಸ್ತ್ರಗಳನ್ನು ಕೊಂಡೊಯ್ಯಬೇಕಾದುದು ಸಹಜವೇ. ಅಮರಾವತಿಗೆ ದಾಳಿಯಿಡುವ ಭೀಮನಿಗೆ ಹಸ್ತಿನಪುರಿ ಯಾವ ಲೆಕ್ಕ? ಆದ್ದರಿಂದ ಮೇಲಿನ ಪಾಠವನ್ನೇ

ನಮ್ಮ ಸಂಗ್ರಹದಲ್ಲಿ ಉಳಿಸಿಕೊಂಡಿದೆ.

(ii) ವಿರಾಟನಗರಿಯಲ್ಲಿ ಧರ್ಮರಾಜನು ರಾಜನ ಬಳಿ ಸಂನ್ಯಾಸಿಯಾಗಿ ನಿಂತನು. ಆ ಬಳಿಕ,

ಹೋದುವಿತ್ತಲು ಕೆಲವುದಿನ ತನ
ಗಾದ ಸಾಹಾಯ್ಯದಲಿ ರಿಪುಬಲ
ಭೇದಿ ಮಾರುತಿ ಬಂದು ಹೊಕ್ಕನು ಮತ್ಸ್ಯಪುರವರವ||

ಈ ಪದ್ಯಾರ್ಥದಲ್ಲಿ ಗಮನಿಸಬೇಕಾದ ಎರಡು ಅಂಶಗಳಿವೆ. 'ತನಗಾದ ಸಾಹಾಯ್ಯದಲಿ' ಎಂದರೇನೆಂಬುದು ಅರ್ಥವಾಗುವುದಿಲ್ಲ. ತನ್ನ ವೃತ್ತಿಗೆ ಸಹಾಯಕವಾದ ಪದಾರ್ಥಗಳೊಡನೆ ಎಂದು ಅರ್ಥವೇ? ಎಲ್ಲ ಪ್ರತಿಗಳಲ್ಲಿಯೂ ಇದೇ ಪಾಠವಿದೆ. ಆದರೆ ಜಾಜೂರಿನ ಪ್ರತಿಯಲ್ಲಿ 'ತನಗಾದ ಬಾಣಸವೇಷವಲಿ ರಿಪುಭೇದಿ ಮಾರುತಿ' ಎಂದಿದೆ. ಇದು ತಿದ್ದಿದ ಪಾಠವೆಂಬುದು ಸ್ಪಷ್ಟ ಆದರೆ ಅರ್ಥಸಾಮಂಜಸ್ಯಕ್ಕಾಗಿ ಇದನ್ನು ಉಳಿಸಿಕೊಂಡಿದೆ. ಎರಡನೆಯದಾಗಿ ಮೇಲಿನ ಪದ್ಯವಾಗುತ್ತಲೇ ವಿರಾಟನು 'ಏನು ಪರಿಣತಿ ನಿನಗೆ' ಎಂದು ಭೀಮನನ್ನು ಪ್ರಶ್ನಿಸುತ್ತಾನೆ. 'ಬಂದು ಹೊಕ್ಕನು ಮತ್ಸ್ಯಪುರವರವ' ಎಂಬುದಕ್ಕೂ 'ಏನು ಪರಿಣತಿ ನಿನಗೆ' ಎಂಬ ವಿರಾಟನ ಪ್ರಶ್ನೆಗೂ ಬಹು ಅಂತರ. ಕುಮಾರವ್ಯಾಸನಲ್ಲಿ ಒಂದು ಪದ್ಯಕ್ಕೂ ಇನ್ನೊಂದು ಪದ್ಯಕ್ಕೂ ಇಷ್ಟು ಅಂತರವಿರುವುದಿಲ್ಲ. ಇದಕ್ಕೆ ಪ್ರತಿಯಾಗಿ 'ಬಂದು ಕಂಡನು ಮತ್ಸ್ಯಭೂಪತಿಯ' ಎಂಬ ಪಾಠದಿಂದ ಈ ಅಂತರ ಕಡಮೆಯಾಗುವುದಿಲ್ಲವೆ?

(iii) ಸುರಪನರಸಿಯ ಶಾಪದಲಿ ಸಿತತುರಗ 'ನೆಜಿತಿವೆಣ್ಣಾ'ಗುವುದಕ್ಕೆ ಬದಲಾಗಿ 'ಅರೆವೆಣ್ಣಾ'ಗುವುದು ಹೆಚ್ಚು ಸಮಂಜಸವಲ್ಲವೇ? ವಿರಾಟ ನಗರದಲ್ಲಿ ಅನುಪಮಿತಭುಜ

ಸತ್ತರು 'ವೈಮಜಿಕಿದು' ಇದ್ದರಂತೆ! ಪಾಂಡವರ ಅಂದಿನ ಸ್ಥಿತಿಯಲ್ಲಿ ಅದು ಸಾಧ್ಯವಿರಲಿಲ್ಲ. ಆದ್ದರಿಂದ 'ವೈಮಜಿಕಿ' ಎಂಬ ಪಾಠಕ್ಕೆ ಪ್ರತಿಯಾಗಿ 'ವೈಗಜಿಕಿ' ಎಂಬ ಪಾಠ ಹೆಚ್ಚು ಸಮಂಜಸವೂ ಉಚಿತವೂ ಆಗಿದೆ.

ಸಂಗ್ರಹದ ಪಾಠವನ್ನು ಶ್ರದ್ಧೆಯಿಂದ ಸರಿನೋಡಿದೆವೆಂಬುದನ್ನು ತೋರಿಸಲು ಮೇಲಿನ ಉದಾಹರಣೆಗಳನ್ನು ಕೊಡಲಾಯಿತೇ ಹೊರತು ಇನ್ನಾವ ದೃಷ್ಟಿಯಿಂದಲೂ ಅಲ್ಲ. ನಮ್ಮ ಸಂಗ್ರಹದಲ್ಲಿಯೂ ಅನೇಕ ಲೋಪದೋಷಗಳುಂಟೆಂಬುದನ್ನು ಬಲ್ಲೆವು. ಮುದ್ರಣದಿಂದ ಮುದ್ರಣಕ್ಕೆ ಅವು ನೇರ್ಪಡುತ್ತ ಹೋಗುವುವೆಂಬ ಭರವಸೆ ನಮಗುಂಟು. ಇದರಲ್ಲಿರುವ ದೋಷಗಳನ್ನು ಬಲ್ಲವರು ತಿಳಿಸಿಕೊಟ್ಟಲ್ಲಿ ಅವನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತೇವೆ.

ಕನ್ನಡನಾಡಿನ ಮಹಾಜನರೂ, ವಿಶ್ವವಿದ್ಯಾಪೀಠಗಳೂ, ವಿದ್ಯಾಸಂಸ್ಥೆಗಳೂ ನಮ್ಮ ಇತರ ಭಾರತಸಂಗ್ರಹಗಳ ವಿಷಯದಲ್ಲಿ ತೋರಿರುವ ಆದರಾಭಿಮಾನಗಳನ್ನು ಈ ಸಂಗ್ರಹಕ್ಕೂ ತೋರಿಸುವರೆಂದು ನಂಬುತ್ತೇವೆ.

| | |
|---|---|
| ಶಾರದಾ ಮಂದಿರ<br>೧೪೦೬, ಕೃಷ್ಣಮೂರ್ತಿಪುರ,<br>ಮೈಸೂರು. | ತ. ಸು. ಶಾಮರಾಯ<br>ಎಚ್. ಎಂ. ಶಂಕರನಾರಾಯಣರಾವ್<br>ಸಂಪಾದಕರು |

# ವಿಷಯಾನುಕ್ರಮಣಿಕೆ

---



---

# ಪೀಠಿಕೆ

---

## ೧. ಕವಿಚರಿತ್ರೆ

ಮಹಾಕವಿ ನಾರಣಪ್ಪನ ಕಾಲ, ಮತಗಳ ವಿಚಾರದಲ್ಲಿ ಭಿನ್ನಾಭಿಪ್ರಾಯವಿದ್ದು, ವಿಪುಲವಾದ ಚರ್ಚೆ ನಡೆದಿದೆ. ಇಲ್ಲಿ ಆ ಚರ್ಚೆಯ ಗೋಜಿಗೆ ಹೋಗದೆ, ಬಹುಜನ ಸಮ್ಮತವಾದ ಒಂದು ನಿರ್ಧಾರಕ್ಕೆ ನಾವೂ ಶರಣು ಹೋಗುತ್ತೇವೆ.

ನಾರಣಪ್ಪನ ಕಾಲ ಕ್ರಿ. ಶ. ೧೩ನೆಯ ಶತಮಾನದ ಪೂರ್ವಾರ್ಧವೆಂದು ಶ್ರೀಮಾನ್ ಮಂಜೇಶ್ವರ ಗೋವಿಂದ ಪೈ ಅವರು ನಿರ್ಧರಿಸಿದ್ದಾರೆ.* ಅವರು ಕೊಡುವ ಕಾರಣಗಳು ಸ್ಥೂಲವಾಗಿ ಇಷ್ಟು—

೧. ಗದುಗಿನ ವೀರನಾರಾಯಣಸ್ವಾಮಿಯ ದೇವಸ್ಥಾನದಲ್ಲಿರುವ ಕ್ರಿ. ಶ. ೧೫೩೯ರ ಶಾಸನ ಒಂದರಲ್ಲಿ 'ಕುಮಾರವ್ಯಾಸ' ಎಂಬ ಹೆಸರನ್ನು ಸ್ಪಷ್ಟವಾಗಿ ತಿಳಿಸಿರುವುದರಿಂದಲೂ, ಕುಮಾರವ್ಯಾಸನು ರಚಿಸದೆ ಬಿಟ್ಟ ಇತರ ಪರ್ವಗಳನ್ನು ಕೃಷ್ಣರಾಯ (ಕ್ರಿ. ಶ. ೧೫೦೯-೧೫೨೯)ನ ಅಪ್ಪಣೆಯ ಮೇರೆಗೆ ತಾನು ರಚಿಸಿದೆನೆಂದು ತಿಮ್ಮಣ್ಣ ಕವಿ ತನ್ನ ಶಾಂತಿಪರ್ವದಲ್ಲಿ ಹೇಳಿಕೊಂಡಿರುವುದರಿಂದಲೂ ನಾರಣಪ್ಪನು ಕ್ರಿ. ಶ. ೧೫೦೦ಕ್ಕೂ ಹಿಂದಿನವನೆಂಬುದು ಸ್ಪಷ್ಟವಾಗಿದೆ.

---

*ಕುಮಾರವ್ಯಾಸ ಪ್ರಶಸ್ತಿ: ಕಾಲವಿಚಾರ.

೨. ನಾರಣಪ್ಪ ತನ್ನ ಕಾವ್ಯದಲ್ಲಿ, ದ್ರೌಪದೀ ಸ್ವಯಂವರಕ್ಕೆ 'ಮಹೇಶ್ವರ ಜೈನ ಭೈರವ ಬುದ್ಧ ಲಿಂಗಿಗಳು' ಬಂದಿದ್ದರೆಂದು ಹೇಳಿದ್ದಾನೆ. 'ಲಿಂಗಿ' ಎಂದು ವ್ಯವಹರಿಸಿರುವುದು ಬಸವೇಶ್ವರನ ಸಂಪ್ರದಾಯದ ಲಿಂಗವಂತರಾದ ವೀರಶೈವರನ್ನೇ. ಅಲ್ಲದೆ ತನ್ನ ಕಾವ್ಯದಲ್ಲಿ ಅಲ್ಲಲ್ಲಿ ಬಲ್ಲಾಳದಡ್ಡಿ, ಬಲ್ಲಾಳನಾಥ ಎಂಬ ಮಾತುಗಳನ್ನು ಕವಿ ಬಳಸಿದ್ದಾನೆ. ಇದು ಹೊಯ್ಸಳರ ವೀರ ಬಲ್ಲಾಳನನ್ನು ಸೂಚಿಸುತ್ತದೆ. ಈ ಕಾರಣಗಳಿಂದ ಕವಿ ಕ್ರಿ. ಶ. ೧೨೦೦ರಿಂದ ಈಚೆಯವನಾಗಿರಬೇಕು.

೩. ನಾರಣಪ್ಪ ಕ್ರಿ. ಶ. ೧೨೦೦ರಿಂದ ೧೫೦೦ರ ಮಧ್ಯದಲ್ಲಿ ಯಾವಾಗ ಇದ್ದನೆಂಬುದನ್ನು ನಿರ್ಧರಿಸಲು, ಆತನ ಕಾವ್ಯದ ಆಂತರಿಕ ಪ್ರಮಾಣಗಳನ್ನು ಪರಿಶೀಲಿಸಬೇಕು.

(ಅ) ಭಾರತದಲ್ಲಿ ಮರಾಠೀ ಭಾಷೆಯ ಅನೇಕ ಮಾತುಗಳು ಬಳಕೆಯಾಗಿವೆ. ಅಲ್ಲದೆ ಈಗ ಪ್ರಥಮೈಕ ವಚನದಲ್ಲಿ ಅಕಾರಾಂತವಾಗಿರತಕ್ಕ ನಾಮವಾಚಕಗಳು ಉಕಾರಾಂತವಾಗಿ ಪ್ರಯೋಗವಾಗಿರುವ, ಅಚ್ಚ ಮರಾಠೀ ವಿಭಕ್ತಿರೂಪಗಳನ್ನೊಳಗೊಂಡ ಒಂದು ಇಡೀ ಷಟ್ಪದಿಯೇ ಭೀಷ್ಮಪರ್ವದ ನಾಲ್ಕನೆಯ ಸಂಧಿ ೭೦ನೆಯ ಪದ್ಯದಲ್ಲಿ ಕಂಡುಬರುತ್ತದೆ. ಈ ಬಗೆಯಾದ ರೂಪ ಕ್ರಿ. ಶ. ೧೨೯೦ರಲ್ಲಿ ರಚಿತವಾದ 'ಜ್ಞಾನೇಶ್ವರಿ' ಎಂಬ ಮರಾಠೀ ಗ್ರಂಥದಲ್ಲಿಯೂ ಕಂಡುಬರುತ್ತದೆ. ಮುಂದೆ ಕೆಲವು ವರ್ಷಗಳಲ್ಲಿಯೇ ಈ ಉಕಾರಾಂತ ಪ್ರಯೋಗ ಲುಪ್ತವಾಗಿಹೋಗಿದೆ. ಆದ್ದರಿಂದ ನಾರಣಪ್ಪ ೧೨೯೦ರ ಸರಿಸುಮಾರಿನಲ್ಲಿ ಇದ್ದಿರಬೇಕು.

(ಆ) ಕುಮಾರವ್ಯಾಸನು ಭಾರತದಲ್ಲಿ ತುರುಕರು, ಸಾಹಣ ಸಮುದ್ರ, ಹಸಣ, ತೆಂಕಣಚೇದಿ, ಸಮುದ್ರ ಹೋಸಲ-

ಇತ್ಯಾದಿ ರಾಜ್ಯಗಳ ರಾಜರು ವ್ಯವಹೃತರಾಗಿದ್ದಾರೆ. ಈ ಮಾತುಗಳು ಸಂಸ್ಕೃತ ಭಾರತದಲ್ಲಿಎಲ್ಲಿಯೂ ಕಂಡುಬರುವುದಿಲ್ಲ. ಸಾಹಣರೆಂದಿರುವವರು ದೇವಗಿರಿಯ ಯಾದವ ವಂಶದ ಅರಸರಾದ ಸೇಉಣರೇ ಎಂದು ತೋರುತ್ತದೆ. ಈ ವಂಶ ನಾಶವಾದದ್ದು ಕ್ರಿ. ಶ. ೧೩೧೮ರಲ್ಲಿ. ಸಮುದ್ರಹೋಸಲ ಎಂದು ಕರೆದಿರುವುದು ದ್ವಾರಸಮುದ್ರದ ಹೊಯ್ಸಳರನ್ನು; ದ್ವಾರಸಮುದ್ರ ಕ್ರಿ. ಶ. ೧೩೧೦ರಲ್ಲಿ ತುರುಕರ ಕೊಳ್ಳೆಗೆ ಈಡಾಯಿತು. ಕ್ರಿ. ಶ. ೧೩೨೭ರಲ್ಲಿ ಸಂಪೂರ್ಣ ವಾಗಿ ನಾಶವಾಯಿತು. ನಾರಣಪ್ಪ ಈ ಅರಸುಗಳನ್ನು ಕಂಡೋ ಕೇಳಿಯೋ ಇರಬೇಕು. ಆದ್ದರಿಂದ ಆತನು ಆ ಕಾಲದ ಹಿಂಚುಮುಂಚಿನವನಾಗಿರಬೇಕು.

(ಇ) ತುರುಷ್ಕ ಅಥವಾ ತುರುಕ ದೊರೆಯನ್ನು ಧರ್ಮರಾಜನ ಪಟ್ಟಾಭಿಷೇಕಕ್ಕೆ ಕರಸಿ ಕವಿ ತನ್ನ ಕಾವ್ಯದಲ್ಲಿ ಮನ್ನಣೆ ತೋರಿಸುವುದರಿಂದಲೂ, ಎಲ್ಲಿಯೂ ಅವರ ಹಾವಳಿಯನ್ನು ವ್ಯಂಗವಾಗಿ ಕೂಡ ಸೂಚಿಸಿಲ್ಲವಾದುದರಿಂದಲೂ ಈತನು ತುರುಕರ ಹಾವಳಿ ಕರ್ಣಾಟಕಕ್ಕೆ ಸೋಕುವ ಮುನ್ನವೇ ಇದ್ದವನಾಗಿರಬೇಕು.

(ಈ) ಕ್ರಿ.ಶ. ೧೨೧೩ರಲ್ಲಿ ಗದುಗು ಪ್ರಾಂತ್ಯವು ಹೊಯ್ಸಳರ ಕೈತಪ್ಪಿ ಸೇಉಣರ ವಶವಾಯಿತು. ಕವಿಯು ತನ್ನ ಕಾವ್ಯದಲ್ಲಿ ವಿಪುಲವಾಗಿ ಮರಾಠೀ ಪದಗಳನ್ನು ಬಳಸಿರುವುದರಿಂದ ಆತನು ೧೨೧೩ಕ್ಕೆ ಈಚೆಯಲ್ಲೇ ಕಾವ್ಯವನ್ನು ಬರೆದಿರಬೇಕು. ಆದರೆ ತಾನು ಸೇಉಣರ ರಾಜ್ಯದಲ್ಲಿದ್ದರೂ ತನ್ನ ಕಾವ್ಯದಲ್ಲಿ ಹೊಯ್ಸಳರಿಗೆ ಗೌರವ ತೋರಿಸುವುದರಿಂದ ಆತನ ನಾಡು ಹೊಯ್ಸಳರ ಕೈತಪ್ಪಿ ಇನ್ನೂ ಬಹುಕಾಲವಾಗಿದ್ದಿರಲಾರದು; ಹೆಚ್ಚೆಂದರೆ ೧೦—೨೦ ವರ್ಷಗಳಾಗಿರಬಹುದು.

ಆದ್ದರಿಂದ ನಾರಣಪ್ಪ ಕ್ರಿ. ಶ. ೧೨೩೦—೩೫ ರೊಳಗೆ ಇದ್ದಿರಬೇಕು.

ಮಹಾಕವಿಯೊಬ್ಬನು ತಮ್ಮವನೆಂದು ಹೇಳಿಕೊಳ್ಳುವುದು ಹೆಮ್ಮೆಯೇ ಸರಿ. ನಾರಣಪ್ಪ ವೀರಶೈವನೆಂದು, ಬ್ರಾಹ್ಮಣನೆಂದು —ಬ್ರಾಹ್ಮಣರಲ್ಲಿ ಸ್ಮಾರ್ತನೆಂದು, ವೈಷ್ಣವನೆಂದು, ಭಾಗವತ ಪಂಥದವನೆಂದು — ವಾದಮಾಡುವುದುಂಟು. ಇದ್ದುದನ್ನು ಇದ್ದಂತೆ ಕಂಡುಹಿಡಿಯಲು ಹೋಗಬೇಕೆಂಬ ದೃಷ್ಟಿಸಾಧುವಾದುದಾದರೂ ಅಂಧಶ್ರದ್ಧೆಯಿಂದ ಹುರಿಗೊಂಡು, ಕದನಕ್ಕೆ ಇಳಿಯುವುದು ಅಷ್ಟು ಉಚಿತವಾದುದಲ್ಲ. ನಾರಣಪ್ಪನಂತಹ ಮಹಾಕವಿ ನಮ್ಮ ನಾಡಿನವನೆಂಬ ದೊಡ್ಡತನವೇ ನಮಗೆ ಸಾಲದೆ ? ಎಲ್ಲೆಡೆಯಿಂದಲೂ ಆಹಾರವನ್ನು ಹೀರಿ ಗಗನ ಚುಂಬಿತವಾಗಿ ನಿಂತಿರುವ ಭವ್ಯವೃಕ್ಷದಂತೆ ಕವಿ ಎಲ್ಲ ಮತಗಳ, ಎಲ್ಲ ಧರ್ಮಗಳ ಸಾರವನ್ನು ಹೀರಿ, ತನ್ನ ಸಾರಸ್ವತ ಸಂಪತ್ತಿನಿಂದ ತೊಳಗಿಬೆಳಗುವವನು. ಕುಮಾರವ್ಯಾಸನ ಕಾವ್ಯದಲ್ಲಿ ಸರ್ವ ಧರ್ಮಗಳು ಸಮನ್ವಯಗೊಂಡಿವೆ. ವಿಷ್ಣುವನ್ನು ಅನನ್ಯ ಭಕ್ತಿಯಿಂದ ಸ್ತುತಿಸುತ್ತಾನೆ; ಹಾಗೆಯೇ ಶಿವನನ್ನೂ ಸ್ತುತಿಸುತ್ತಾನೆ. ಆತನ ಕಾವ್ಯದಲ್ಲಿ ಭಕ್ತಿಮಾರ್ಗವಿದೆ, ಕರ್ಮಮಾರ್ಗವಿದೆ; ದ್ವೈತವಿದೆ, ಅದ್ವೈತವಿದೆ, ವಿಶಿಷ್ಟಾದ್ವೈತವಿದೆ. ಆದ್ದರಿಂದ ಆತನನ್ನು ನಮ್ಮ ಮಟ್ಟಕ್ಕೆ ಎಳೆದು, ಜಾತಿಮತಗಳ ಸಂಕೋಲೆಯಲ್ಲಿ ಬಿಗಿದು, ಇದಮಿತ್ಥಂ ಎಂದು ಊಹೆಯಿಂದ ಹೇಳುವುದು ಸಾಹಸದ ಕೆಲಸ. ಹೆಸರಿನಿಂದ ಆತನು ಬ್ರಾಹ್ಮಣನೆಂಬುದು ಖಂಡಿತ. ಅಲ್ಲದೆ ಸಕಲ ಶಾಸ್ತ್ರಾಗಮ ಪುರಾಣಾದಿಗಳನ್ನು ಕರತಲಾಮಲಕವಾಗಿ ಮಾಡಿಕೊಂಡಿದ್ದ ಬಹು ದೊಡ್ಡ ವ್ಯಕ್ತಿ.

ಕವಿಯ ಹುಟ್ಟಿದೂರು ಕೋಳಿವಾಡವೆಂಬ ಒಂದು ಚಿಕ್ಕ ಗ್ರಾಮ. ಆ ಊರು ಆತನ ವಂಶದವರಿಗೆ ಉಂಬಳಿಯಾಗಿ ಬಂದಿತ್ತೆಂದು ಹೇಳುತ್ತಾರೆ. ಈತನು ಗದುಗಿನ ವೀರನಾರಯಣ ಸ್ವಾಮಿಯ ಅಂಕಿತದಲ್ಲಿ ತನ್ನ ಗ್ರಂಥವಾದ ಕನ್ನಡಭಾರತವನ್ನು ಬರೆದಿದ್ದಾನೆ. ಸಂಸ್ಕೃತ ಭಾರತದ ಮೊದಲ ಹತ್ತು ಪರ್ವಗಳ ಕಥೆಯನ್ನು ಮಾತ್ರ ಈತ ಕನ್ನಡಿಸಿದ್ದಾನೆ. ಅಲ್ಲಿಗೇ ಕಾವ್ಯ ಎಂಟು ಸಹಸ್ರ ಪದ್ಯಗಳಿಗಿಂತಲೂ ಹೆಚ್ಚಾಗಿ ಬೆಳೆದುಹೋಗಿದೆ. ನಾರಣಪ್ಪ ಭಾರತವನ್ನು ಮಾತ್ರವಲ್ಲದೆ ಐರಾವತವೆಂಬ ಮತ್ತೊಂದು ಕಾವ್ಯವನ್ನೂ ಬರೆದಿರುವನೆಂದು ಕವಿಚರಿತ್ರೆಕಾರರಾದ ದಿವಂಗತ ಆರ್. ನರಸಿಂಹಾಚಾರ್ಯರು ತಿಳಿಸುತ್ತಾರೆ.

ಮಹಾಕವಿ ನಾರಣಪ್ಪನನ್ನು ಆತನ ತರುವಾಯ ಬಂದ ಅನೇಕ ಕವಿಗಳು ಬಾಯಿತುಂಬ ಹೊಗಳಿದ್ದಾರೆ. ನಮ್ಮ ನಾಡಿನ ಅತ್ಯಂತ ಜನಪ್ರಿಯವಾದ ಕಾವ್ಯಗಳಲ್ಲಿ ಇದೂ ಒಂದು.

## ೨. ಕಾವ್ಯದ ಮೂಲ, ಅದರ ಹಿರಿಮೆ.

ನಾರಣಪ್ಪನ ಕನ್ನಡ ಮಹಾಭಾರತಕ್ಕೆ ಮೂಲ ಸಂಸ್ಕೃತದ ಮಹಾಭಾರತ. ಇದರ ಕರ್ತೃ ವ್ಯಾಸಮಹರ್ಷಿಯೆಂದು ಪ್ರತೀತಿ ಈತನ ಮತ್ತು ಈತನ ಕಾವ್ಯದ ಹಿರಿಮೆಯನ್ನು ಕವಿಯೊಬ್ಬನು 'ಜಗತ್ತಿನಲ್ಲಿ ಇರುವುದೆಲ್ಲವೂ ಭಾರತದಲ್ಲಿದೆ; ಭಾರತದಲ್ಲಿ ಇಲ್ಲದುದು ಜಗತ್ತಿನಲ್ಲಿ ಇಲ್ಲ.' ಎಂದು ಹೇಳಿದ್ದಾನೆ. ಇದು ಪರಮಪೂಜ್ಯವಾದ ಧರ್ಮಗ್ರಂಥವೆಂದು ಪರಿಗಣಿತವಾಗಿದೆ. ಧರ್ಮ ವಿಷಯಕವಾದ ಅನೇಕ ಕ್ಲಿಷ್ಟಸಮಸ್ಯೆಗಳಿಗೆ ಇಲ್ಲಿ ಸದುತ್ತರ ದೊರೆಯುತ್ತದೆ. ಆದ್ದರಿಂದ, ಧರ್ಮಕ್ಕೆ ದೊಡ್ಡ ಆಧಾರದಂತಿರುವ ಈ ಗ್ರಂಥವನ್ನು ಜನತೆ ಪಂಚಮವೇ

ದವೆಂದು ಕರೆದು ಗೌರವಿಸಿದೆ. ಕಾವ್ಯದ ಮಧ್ಯದಲ್ಲಿ ಜನಮೇಜಯನಿಗೋ, ಧೃತರಾಷ್ಟ್ರನಿಗೋ, ಋಷಿಗಳಿಗೋ ಧರ್ಮವಿಷಯಕವಾದ ಸಂದೇಹ ಹುಟ್ಟಿದ ಕಡೆ, ಅದರ ನಿವಾರಣೆಗಾಗಿ ಧರ್ಮಜಿಜ್ಞಾಸೆನಡೆದಿದೆ; ರೌಮಹರ್ಷಣಿ, ಸನತ್ಸುಜಾತಾದಿಗಳು ತಮ್ಮ ಧರ್ಮಜ್ಞಾನವನ್ನು ಈ ಕಾವ್ಯಗಂಗೆಯಲ್ಲಿ ಸಂಗಮ ಮಾಡಿದ್ದಾರೆ; ಯಕ್ಷ, ನಹುಷ ಮೊದಲಾದವರು ಧರ್ಮದ ಪ್ರೌಢ ಪರೀಕ್ಷೆಯನ್ನು ನಡೆಸಿದ್ದಾರೆ· ಕಾವ್ಯದ ನಾಡಿ ನಾಡಿಯಲ್ಲಿಯೂ ಧರ್ಮರಸ ಹರಿಯುತ್ತಿದೆ. ಆದರೂ ಇದು ಬರಿಯ ಧರ್ಮಗ್ರಂಥವಲ್ಲ; ಒಂದು ಇತಿಹಾಸ. ಇದು ಭರತಖಂಡದ ಒಂದು ಕಾಲದ ನಾಗರಿಕತೆ ಸಂಸ್ಕೃತಿಗಳನ್ನು ಒಳಗೊಂಡು ಸಮಗ್ರ ಜನ ಜೀವನವನ್ನು ಅದ್ಭುತ ರೀತಿಯಲ್ಲಿ ವಿವರಿಸುತ್ತದೆ. ಇದನ್ನು ಹೇಳುತ್ತಿರುವ ವ್ಯಾಸಮಹರ್ಷಿ ಕುರುವಂಶ ಅಳಿದುಹೋಗುತ್ತಿದ್ದಾಗ, ಅದಕ್ಕೆ ಜೀವಕಳೆ ಕೊಟ್ಟವನು. ಒಂದು ದೃಷ್ಟಿಯಿಂದ ಮೂಲಪುರುಷನಾಗಿದ್ದುಕೊಂಡು, ಆ ವಂಶದ ಮೂರು ತಲೆಮಾರುಗಳ ಬಾಳು ಅಳಿವುಗಳನ್ನು ಕಣ್ಣಾರ ಕಂಡವನು. ಉತ್ತಮ ಇತಿಹಾಸಕಾರನಂತೆ ಸತ್ಯವನ್ನು ಸದಾ ದೃಷ್ಟಿಯಲ್ಲಿಟ್ಟುಕೊಂಡು, ಯಾವುದೊಂದು ಪಕ್ಷವನ್ನೂ ವಹಿಸದೆ, ಅನುಭವೈಕವೇದ್ಯವಾದುದನ್ನು ಕಾವ್ಯವಾಗಿ ಕಟ್ಟಿದ್ದಾನೆ; ಹಾಗೆಮಾಡಿ ತನ್ನ ಕಾರ್ಯದಲ್ಲಿ ಕೃತಕೃತ್ಯನಾಗಿದ್ದಾನೆ.

ರಾಮಾಯಣದ ಕವಿ ಆದಿ ಕವಿಯೆಂದು ಪ್ರಖ್ಯಾತನಾಗಿದ್ದರೂ-ಧರ್ಮ ಇತಿಹಾಸಗಳನ್ನು ಒಳಗೊಂಡ ಭಾರತ ಪುರಾಣವೆಂದು ಪರಿಗಣಿತವಾಗಿ, ಅದರ ಕರ್ತೃವಿಗೆ ಆದಿ ಕವಿಯ ಪಟ್ಟ ತಪ್ಪಿ ಹೋಗಿದ್ದರೂ—ನ್ಯಾಯವಾಗಿ ಆ ಕೀರ್ತಿ ಭಾರತಕರ್ತೃವಿಗೇ ಸಲ್ಲಬೇಕು. ಭಾರತವು ರಾಮಾಯಣಕ್ಕಿಂತಲೂ

ಪುರಾತನವಾದುದೆಂದು ಬಹುಜನವಿದ್ವಾಂಸರ ಹೇಳಿಕೆ. ಅಪೌರ ಷೇಯಗಳೆಂದು ಪ್ರಖ್ಯಾತವಾಗಿರುವ ವೇದಗಳಲ್ಲಿ ಬೇರಿಟ್ಟು, ಜನರ ಬಾಯಿಂದ ಬಾಯಿಗೆ ವೇದಗಳಂತೆ ಹರಿದು ಬರುತ್ತಾ ಹತ್ತಾರು ನೂರಾರು ಕೊಂಬೆಗಳನ್ನು ಒಳಗೊಂಡು ಬೆಳೆದು ನಿಂತಿದೆ ಈ ಕಾವ್ಯ. ಗಾಯಕರಾದ ಕವಿಗಳು, ಶ್ರೋತೃಗಳು ತಮ್ಮ ಒಲು ವಿಗೆ ತಕ್ಕಹಾಗೆ ಇದನ್ನು ಬೆಳಸಿದರು. ಬೆಳೆದು ಬೆಳೆದು ಒಂದು ಲಕ್ಷ ಶ್ಲೋಕಗಳನ್ನು ಒಳಗೊಂಡ ಮಹಾಕಾವ್ಯವಾಯಿತು.

ಬೃಹತ್ತು ಮಹತ್ತುಗಳೆರಡರಲ್ಲಿಯೂ ಭಾರತವನ್ನು ಮೀರಿರುವ ಕಾವ್ಯ ಇನ್ನೂ ಜಗತ್ತಿನಲ್ಲಿ ಉದಯವಾಗಿಲ್ಲ. ಈ ಕಾವ್ಯವಾರಿಧಿಯಿಂದ ದೊಡ್ಡ, ಪುಟ್ಟ ನೂರಾರು ಕವಿಗಳು ತಮ್ಮ ಕಾವ್ಯಗಳಿಗೆ ವಸ್ತುರತ್ನವನ್ನು ಆಯ್ದುಕೊಂಡಿದ್ದಾರೆ. ಎಷ್ಟು ಮೊಗೆದರೂ ಮುಗಿಯದಷ್ಟು ವಿಷಯಗಳನ್ನು ಒಳ ಗೊಂಡು ಪುಷ್ಟವಾಗಿರುವ ಮಹಾಕಾವ್ಯ ಅದು. ಹೀಗೆ ಜನಾನುರಾಗವನ್ನು ಗಳಿಸಿಕೊಂಡಿರುವುದರಲ್ಲಿ ಇದರೊಡನೆ ಸ್ಪರ್ಧಿಸಿರುವ ಕಾವ್ಯವೆಂದರೆ ರಾಮಾಯಣವೊಂದೇ. ಆದರೆ ರಾಮಾಯಣ, ಧರ್ಮ ಧೇನು ಇನ್ನೂ ಮೂರು ಕಾಲುಗಳನ್ನು ಊರಿ ನಿಂತಿದ್ದ ತ್ರೇತಾಯುಗಕ್ಕೆ ಸಂಬಂಧಿಸಿದುದು. ನಮ್ಮ ಯುಗಕ್ಕೆ ಅದು ಬಹುದೂರ. ಅದರಲ್ಲಿ ಕಂಡು ಬರುವ ಆದರ್ಶ ಚಿತ್ರ 'ದೂರದ ಬೆಟ್ಟ, ಕಣ್ಣಿಗೆ ನುಣ್ಣಗೆ.' ಸುಲಭವಾಗಿ ಅನುಸರಣ ಸಾಧ್ಯವಲ್ಲ. ಆದರೆ ಭಾರತದ ವಿಚಾರ ಹಾಗಲ್ಲ. ಇಲ್ಲಿನ ಹಲವು ಪಾತ್ರಗಳು ನಮ್ಮ ಸಮೀಪ ಬಂಧುಗಳು. ಅವರ ಜೀವನ ನಮ್ಮ ಜೀವನಕ್ಕೆ ಭೂತಕನ್ನಡಿ ಹಿಡಿದಂತೆ ಇದೆ. ಅವರು ಮಾನವ ಸಹಜವಾದ ಗುಣದೋಷಗಳಿಂದ ಕೂಡಿ ಸಜೀವ ವ್ಯಕ್ತಿಗಳಾಗಿ ತೋರುತ್ತಾರೆ. ರಾಮಾಯಣದ

ಪಾತ್ರಗಳಿಗಿಂತಲೂ ಭಾರತದ ಪಾತ್ರಗಳು ಹೆಚ್ಚು ಅನುಸರಣ ಸಾಧ್ಯರೆಂದು ತೋರುತ್ತದೆ.

ಇಂಥ ಲೋಕಪ್ರಿಯವಾದ ಈ ಕಾವ್ಯವನ್ನು ನಮ್ಮವರು ಮಾತ್ರವೇ ಅಲ್ಲದೆ ಹೊರಗಿನವರೂ ಬಾಯಿತುಂಬ ಹೊಗಳಿದ್ದಾರೆ. ಅವರಲ್ಲಿ ಅಮೆರಿಕಾದೇಶದ ಪ್ರೊಫೆಸರ್ ಎ. ಆರ್. ಆರೆಂಜ್ ಎಂಬ ವಿದ್ವಾಂಸರು ತಮ್ಮ ದೇಶದ ಸಾಹಿತ್ಯದ ಇಂದಿನ ಅವನತಿಯನ್ನು ನೆನೆದು, ತಮ್ಮ ಉದ್ಧಾರಕ್ಕೆ ಭರತ ಖಂಡವೂ ಮಹಾಭಾರತವೂ ಶರಣ್ಯವೆಂದು ಹೇಳಿಕೊಂಡಿದ್ದಾರೆ. ಮಹಾಭಾರತಕ್ಕೆ ಆತನು ಅರ್ಪಿಸಿರುವ ಪುಷ್ಪಾಂಜಲಿ ಇದು—ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಸೃಷ್ಟಿಮಾಡುವ ಪ್ರಯತ್ನಗಳಲ್ಲಿ ಮಹಾಭಾರತವು ಮಾನವ ಇತಿಹಾಸದಲ್ಲಿಯೇ ಏಕೈಕವೂ ಅತ್ಯಂತ ಮಹತ್ವಪೂರಿತವಾದುದೂ ಆಗಿದೆ. ಅದನ್ನು ರಚಿಸಿದ ಮಹಾಪುರುಷನ ಮೇಧಾಶಕ್ತಿಯನ್ನು ಅಳೆಯುವುದು ಯಾರಿಗಾದರೂ ಸುಲಭವಲ್ಲ. ಆ ಬುದ್ಧಿಶಕ್ತಿಯನ್ನು ಅರಿತುಕೊಳ್ಳಲು ಮಾಡುವ ಪ್ರಯತ್ನವೇ ಒಂದು ಉದಾರವಾದ ವಿದ್ಯಾಭ್ಯಾಸವಾದೀತು! ಅದರ ವಿಷಯಾನುಕ್ರಮಣಿಕೆಯ ಪರಿಚಯವೇ ಸಾಕು, ನಮ್ಮ ಪ್ರಾರ್ಥನಾ ದಿನದ ಯಾತ್ರೆಗಿಂತಲೂ ಹೆಚ್ಚು ಮಹತ್ವಪೂರಿತವಾದುದು. 'ಇಲಿಯಡ್' 'ಒಡಸ್ಸಿ' ಗಳು ಅದರಲ್ಲಿನ ಉಪಕಥೆಗಳಿಗೆ ಸಮಾನ ಜಗತ್ಪ್ರಸಿದ್ಧವಾದ ಭಗವದ್ಗೀತೆಯು, ಅದರಲ್ಲಿ ಬಂದಿರುವ ಅನೇಕ ಯುದ್ಧಗಳಲ್ಲಿ ನಡೆಯಲಿದ್ದ ಒಂದು ಯುದ್ಧದ ಪೂರ್ವಭಾವಿಯಾಗಿ ನಡಸಿದ ಒಂದು ಸಂಭಾಷಣೆ ಮಾತ್ರ. ನೂರಾರು ಪಾತ್ರಗಳು; ಘಟನೆಗಳ ಮೇಲೆ ಘಟನೆಗಳು; ಅವುಗಳಲ್ಲಿ ಅನಂತಕಾಲದ

ವಿಶ್ವವ್ಯಾಪ್ತಿ. ಇಷ್ಟಾದರೂ ಒಂದೆಡೆಯಲ್ಲಿಯೂ ಕಾವ್ಯದ ರಚನೆ ಕುಂಟುವುದಿಲ್ಲ......ಅದನ್ನು ಬರಿಯ ಸಾಹಿತ್ಯವೆಂದೇ ಸ್ವೀಕರಿಸಿದರೂ, ಅದರ ಮಹತ್ತು ಬೃಹತ್ತುಗಳು ಅಸದೃಶವಾದುವುಗಳು. ಅವರಲ್ಲಿನ ಉದಾಹರಣೆಗಳೂ ಉಪದೇಶಗಳೂ ಕಾಲದಷ್ಟು ಅನಂತ ವಿಸ್ತಾರವಾಗಿ, ವಿಶ್ವತೋಮುಖವಾಗಿ ಬೆಳೆದಿವೆ. ಈಚಿನ ಕಾಲದ ಸಾಹಿತ್ಯಗ್ರಂಥಗಳನ್ನು ಓದುವುದರಲ್ಲಿ ಕಂಡುಬರದ ವಾಸ್ತವಾನುಭವವು ಭಾರತ ಪಠನದಿಂದ ಉಂಟಾಗುತ್ತದೆ. ಇದರ ಪಠಣದಿಂದ ಮಾನವನು ಸತ್ಯಾನುಭವದಿಂದ ಹೇಗೋ ಹಾಗೆ ಬೇರೊಬ್ಬ ವ್ಯಕ್ತಿಯೇ ಆಗಿಹೋಗುತ್ತಾನೆ. (ಕೂಡಲಿ—ಶೃಂಗಗಿರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀಸ್ವಾಮಿಗಳ 'ವೇದವ್ಯಾಸರು' ಎಂಬ ಗ್ರಂಥದಿಂದ).

## ೩ ಕನ್ನಡ ಭಾರತಗಳು—ಪಂಪ—ನಾರಣಪ್ಪ

ಸಂಸ್ಕೃತ ಭಾರತವು ಅನೇಕ ಕವಿಗಳಿಗೆ ಕಾವ್ಯವಸ್ತುವನ್ನು ಒದಗಿಸಿರುವುದು ಮಾತ್ರವೇ ಅಲ್ಲದೆ ಇಡೀ ಗ್ರಂಥವೇ ಭರತಖಂಡದ ಹಲವು ಭಾಷೆಗಳಿಗೆ ಪರಿವರ್ತಿತವಾಗಿದೆ. ಕನ್ನಡದಲ್ಲಂತೂ ಸಾಹಿತ್ಯದ ಅರುಣೋದಯವಾಗಿರುವುದೇ ಭಾರತದ ಭಾಸ್ಕರನಿಂದ. ಕನ್ನಡದ ಆದಿಕವಿ ಪಂಪ ರಚಿಸಿರುವ 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪ ಭಾರತ' ಕನ್ನಡ ಸಾಹಿತ್ಯದಲ್ಲಿ ಅದ್ವಿತೀಯವಾದ ಗ್ರಂಥ. ಪಂಪನ ತರುವಾಯ ಗ್ರಂಥರಚನೆ ಮಾಡಿದವರೆಲ್ಲರೂ ಆತನನ್ನು ಮುಕ್ತಕಂಠದಿಂದ ಹೊಗಳಿದ್ದಾರೆ; ಭಕ್ತಿಕುಸುಮಾಂಜಲಿಯನ್ನು ಅರ್ಪಿಸಿದ್ದಾರೆ. ಆತನ ತರುವಾಯ ಭಾರತ ರಚನೆ

ಯಿಂದ ಪ್ರಖ್ಯಾತನಾಗಿರುವ ಕವಿ ನಾರಣಪ್ಪ. ಈತ ವರಕವಿ. ಈ ಇಬ್ಬರೂ ಒಂದೊಂದು ದೃಷ್ಟಿಯಿಂದ 'ಅದ್ವಿತೀಯರು. ಪಂಪನು ಚಳುಕ್ಯ ವಂಶದ ಅರಿಕೇಸರಿಯ ಆಸ್ಥಾನಕವಿ ಯಾಗಿ, ದಂಡನಾಯಕನಾಗಿ, ಗೆಳೆಯನಾಗಿ ಬಾಳಿ ಬದುಕಿ ದನು. ಆತ ಬದುಕಿದ್ದುದು ಭಾರತದ ವೀರಯುಗದಲ್ಲಿ; ಕ್ಷತ್ರಿಯ ವೀರರ ಅಸ್ತ್ರಶಸ್ತ್ರಗಳ ಮಾರ್ಮೊಳಗಿನಿಂದ ಪ್ರಕ್ಷುಭಿತ ವಾಗಿದ್ದ ವಾತಾವರಣದಲ್ಲಿ. ಪಂಪನಿಗೆ ಕಂಠಹಿಡಿದರೆ ಕಾವ್ಯ, ಕತ್ತಿ ಹಿಡಿದರೆ ಕದನ ಸ್ವಭಾವಿಕವಾಗಿ ಹೋಗಿತ್ತು. ಆದ್ದ ರಿಂದ ಆತನ ಕಾವ್ಯದಲ್ಲಿ ವೀರರಸ ನೊರೆಗಟ್ಟಿ ಹರಿಯುತ್ತದೆ. ನಾರಣಪ್ಪನ ಸ್ವಭಾವ, ಸನ್ನಿವೇಶಗಳು ಬೇರೆ ಬಗೆಯವು. ಆತನ ಕಾಲ ಭಕ್ತಿ ಯುಗ. ಅನೇಕ ಶಿವಶರಣರ, ಹರಿದಾಸರ ಭಕ್ತಿ ಪ್ರವಾಹ ಉಕ್ಕಿ, ನಾಡಿನ ಮೂಲೆಮೂಲೆಯಲ್ಲಿಯೂ ಪ್ರವಹಿಸುತ್ತಿದ್ದ ಕಾಲ. ನಾರಣಪ್ಪನೋ ಯಾವ ರಾಜನ ಆಶ್ರಯವೂ ಇಲ್ಲದ ಒಬ್ಬ ಬಡವ. ಹೆಚ್ಚೆಂದರೆ ಒಬ್ಬ ಶಾನು ಭೋಗನಾಗಿದ್ದಿರಬಹುದು. ಆತನ ಕಾವ್ಯ ರಚನೆಗೆ ಪ್ರೇರಕ ಶಕ್ತಿ ಗದುಗಿನ ವೀರನಾರಾಯಣ. ಆದ್ದರಿಂದ ಈತನ ಭಾರತ ದಲ್ಲಿ ಭಕ್ತಿಭಾವವು ಎಲ್ಲೆಲ್ಲಿಯೂ ತಾನೇ ತಾನಾಗಿ ತಾಂಡವ ವಾಡುತ್ತಿದೆ.

ಪಂಪ–ನಾರಣಪ್ಪ ಇವರ ಕಾವ್ಯದ ಸೊಬಗು ಬೇರೆ ಬೇರೆ ರೀತಿಯದು. ಪಂಪ ಕಾವ್ಯ ರಚನೆ ಮಾಡಿದುದು ತನ್ನ ದೊರೆಯ ಮೆಚ್ಚಿಗೆಗಾಗಿ; ಆತನ ಆಸ್ಥಾನದ ಕವಿಗಳ ಮೆಚ್ಚಿಗೆ ಗಾಗಿ. ಆದ್ದರಿಂದ ಆತನ ಕಾವ್ಯ ಪ್ರೌಢವಾಗಿದೆ; ಪಂಡಿತ ಮಾನ್ಯವಾಗಿದೆ. ಆತನ ಕಾವ್ಯ ಸಮತಳ ಪ್ರದೇಶದಲ್ಲಿ ಹರಿಯು ತ್ತಿರುವ ಪೂರ್ಣಪ್ರವಾಹದಂತೆ ಗಂಭೀರವಾದುದು. ನಾರಣ

ಪ್ಪನ ಕಾವ್ಯ ಹಿಮಾಲಯ ಪ್ರದೇಶದಲ್ಲಿ ಪ್ರವಹಿಸುತ್ತಿರುವ ಬ್ರಹ್ಮಪುತ್ರಾ ನದಿಯಂತೆ ಬೆಟ್ಟವನ್ನು ಹತ್ತಿ, ಪ್ರಪಾತಕ್ಕೆ ಧುಮ್ಮಿಕ್ಕಿ, ಭೋರ್ಗರೆಯುತ್ತಾ ಪ್ರವಹಿಸುವುದು. ಪಂಪ ತನ್ನ ಕಾವ್ಯಕ್ಕೆ ಅಲಂಕಾರ ಛಂದಸ್ಸು ವ್ಯಾಕರಣಗಳ ಕಡಿವಾಣವಿಕ್ಕಿ ಹೆದ್ದಾರಿಯಲ್ಲಿ ನಡಸುತ್ತಿದ್ದರೆ, ನಾರಣಪ್ಪನ ಕವಿತಾ ಪಕ್ಷಿ ಸ್ವಚ್ಛಂದವಾಗಿ ಗಿರಿ ವನ ವಿಹಾರಗಳಲ್ಲಿ ಹಾರಿಹೋಗುತ್ತಿದೆ. ಪಂಪನ ಅಚ್ಚು ಕಟ್ಟು, ನಾಗರಿಕತೆ ನಾರಣಪ್ಪನಲ್ಲಿ ಬರದು. ಈತನ ದೃಷ್ಟಿ ಜನಸಾಮಾನ್ಯರ ಮನೋರಂಜನೆ, ಉದ್ಧಾರ. ಇವರಿಗೆ ಅರ್ಥವಾಗುವಂತೆ ಇರುವುದಾದರೆ ಕಾವ್ಯ ನಿಯಮಗಳು ಹಾರಿ ಹೋದರೂ ಈತನಿಗೇನು ವ್ಯಥೆಯಿಲ್ಲ ಆದುದರಿಂದ ಈತನು ಪಂಡಿತರಲ್ಲಿ ಪಂಪನಷ್ಟು ಪ್ರಸಿದ್ಧನಾಗಲಿಲ್ಲ. ಆದರೆ ಪಂಪನಿಗೆ ನಾರಣಪ್ಪನಿಗೆ ದೊರೆತ ಜನಪ್ರಿಯತೆ ದೊರೆಯಲಿಲ್ಲ. ನೀರಿಳಿಯದವ ಜನಸಾಮಾನ್ಯರ ಗಂಟಲಿನಲ್ಲಿ ಪಂಪಭಾರತದ ಕಡುಬು ಹೇಗೆ ಇಳಿಯುವುದು ಸಾಧ್ಯ ?

ಕನ್ನಡ ಸಾಹಿತ್ಯದ ಈ ಇಬ್ಬರು ಮಹಾ ಕವಿಗಳಲ್ಲಿ ಇರುವ ಮತ್ತೊಂದು ದೊಡ್ಡ ವ್ಯತ್ಯಾಸವೆಂದರೆ ಇವರು ಮೂಲವನ್ನು ಬಳಸಿಕೊಂಡಿರುವ ರೀತಿ. ಇಬ್ಬರಿಗೂ ಮೂಲ, ಸಂಸ್ಕೃತ ಭಾರತವೇ ಆದರೂ, ಇಬ್ಬರೂ ಅದರ ಸಂಗ್ರಹ ಕಾರ್ಯದಲ್ಲಿಯೇ ತೊಡಗಿರುವವರಾದರೂ ಅವರಿಬ್ಬರ ದೃಷ್ಟಿ ಕೋನದಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಪಂಪ ಜೈನಧರ್ಮಕ್ಕೆ ಸೇರಿದವನು. ಭಾರತದಲ್ಲಿರುವ ಹಲವು ಘಟನೆಗಳು ಆತನ ಅಭಿರುಚಿಗೆ ಹೊಂದಿಕೊಳ್ಳಲಿಲ್ಲ. ಆದರೆ ಆತನು ಬರೆಯುತಿದ್ದುದು ಬರಿಯ ಭಾರತವಲ್ಲ ; ಸಮಸ್ತ ಭಾರತ. ತನ್ನ ರಾಜನಾದ

ಅರಿಕೇಸರಿಯನ್ನು, ಅರ್ಜುನನಲ್ಲಿ ಅಭೇದ ಭಾವವನ್ನು ಕಲ್ಪಿಸಿ, ಕಥಾನಾಯಕನನ್ನಾಗಿ ಮಾಡಿಕೊಂಡು, ತನ್ನ ಕಾವ್ಯ ವನ್ನು ಸೃಷ್ಟಿಸಿದ. ತನ್ನ ಪೋಷಕನ ಬಿರುದನ್ನೇ ಕಾವ್ಯದ ಹೆಸರಿಗೆ ಬಳಸಿಕೊಂಡು ಅದನ್ನು 'ವಿಕ್ರಮಾರ್ಜುನ ವಿಜಯ' ಎಂದು ಕರೆದ. 'ಪಂಚವಲ್ಲಭೆ' ದ್ರೌಪದಿಯನ್ನು ಅರ್ಜುನನ ಧರ್ಮಪತ್ನಿಯನ್ನಾಗಿ ಸ್ವೀಕರಿಸಿದ. ಜೈನ ಪುರಾಣಗಳ ಪ್ರಕಾರ ನರಕಕ್ಕೆ ಬಿದ್ದುಹೋಗುವ ಕೃಷ್ಣನನ್ನು ಮೂಲದಲ್ಲಿ ಮುಡಿಪಾಗಿಟ್ಟಿದ್ದ ದೇವಸಿಂಹಾಸನದಿಂದ ಕೆಳಕ್ಕೆಳೆದ. ಆತನ ಮಹಿಮೆ ಮಾಯೆಗಳೂ, ಗರಿಮೆ ಹಿರಿಮೆಗಳೂ ಬಂದ ಕಡೆ ಅದನ್ನು ಮೆಲ್ಲಗೆ ತೇಲಿಸಿಕೊಂಡು ಹೋದ. ಹೀಗೆ ಆತನು ಮಾಡಿಕೊಂಡ ಬದಲಾವಣೆಗಳು ನಿರ್ದುಷ್ಟವಾಗಿವೆಯೆಂದಾ ಗಲಿ ಯಶಸ್ವಿಯಾಗಿ ನಿರ್ವಹಣಗೊಂಡಿವೆಯೆಂದಾಗಲಿ ಹೇಳು ವಂತೆಯೇನೂ ಇಲ್ಲ. ಆದರೆ ಕಾವ್ಯದಲ್ಲಿ ಆತನ ಒಲವು ಎತ್ತ ಬಾಗಿದೆಯೆಂಬುದು ಇವುಗಳಿಂದ ಸ್ಪಷ್ಟವಾಗಿ ಗೋಚರವಾಗು ತ್ತದೆ. ನಾರಣಪ್ಪನ ನೋಟ ಇದರಿಂದ ಭಿನ್ನವಾದುದು. ಆತನ ಕಾವ್ಯಕ್ಕೆ ಕಥಾನಾಯಕ ಶ್ರೀಕೃಷ್ಣ. ಭಗವಂತನ ಅವ ತಾರವಾದ ಆತ ಭೂಭಾರ ಹರಣಕ್ಕಾಗಿ ಟೊಂಕ ಕಟ್ಟಿದ್ದಾನೆ. ದುಷ್ಟಶಿಕ್ಷಣ ಶಿಷ್ಟರಕ್ಷಣಕ್ಕಾಗಿ ಕಂಕಣಕಟ್ಟಿದ್ದಾನೆ. ಮಾನವ ನಂತೆ ವ್ಯವಹರಿಸುತಿದ್ದರೂ, ಆತನು ಭಗವಂತನೆಂಬ ಅರಿವು ಕಾವ್ಯದ ಎಲ್ಲ ಪಾತ್ರಗಳಿಗೂ ಇದೆ. ದುರ್ಯೋಧನನು ಕೂಡ ಆತನು ಭಗವಂತನೆಂದು ಬಲ್ಲ; ಆದರೂ ಆತನು ಹರ ಡಿರುವ ಮಾಯಾಜಾಲವನ್ನು ಹರಿಯಲು ಶಕ್ತನಾಗಿಲ್ಲ. ಆದ ಮ್ಯವಾದ, ಅಪಹಾರ್ಯವಾದ ಲೀಲಾ ಸೂತ್ರಗಳಲ್ಲಿ ಸಿಲು,

ಕಪಟನಾಟಕ ಸೂತ್ರಧಾರಿಯಾದ ಕೃಷ್ಣನು ಕುಣಿಸಿದಂತೆ ಕುಣಿಯುತ್ತಿದ್ದಾರೆ, ಎಲ್ಲರೂ.

'ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು' ಎನ್ನುವುದು ಪಂಪನ ಮನೋವೃತ್ತಿ. ಮಾತನಾಡಿದರೆಲ್ಲಿ ಮುತ್ತು ಸುರಿಯುವುದೋ ಎನ್ನುವ ಗಾಂಭೀರ್ಯ. ಮಾತುಗಳೆಲ್ಲವೂ ಸೂತ್ರದಂತೆ. ಎರಡು ಮಾತುಗಳಲ್ಲೇ ಒಂದು ದೊಡ್ಡ ಕಥೆಯನ್ನೇ ಅಡಕಮಾಡಿಬಿಡುತ್ತಾನೆ. ನಾರಣಪ್ಪ ಹಾಗಲ್ಲ. ಹಿಗ್ಗಲಿಸುವುದು ಆತನ ಹುಟ್ಟುಗುಣ. ಪಂಪನು ಒಂದು ಪದ್ಯದಲ್ಲಿ ಹೇಳಿದ ಜರಾಸಂಧವಧೆ ಈತನ ಕೈಯಲ್ಲಿ ೧೨೦ ಪದ್ಯಗಳ ಒಂದು ಸಂಧಿಯಾಗಿ ಪಸರಿಸಿದೆ. ಹತ್ತು ಹನ್ನೆರಡು ಪದ್ಯಗಳಲ್ಲಿ ಪಂಪನು ಅಡಕಮಾಡಿದ ಶಿಶುಪಾಲವಧೆಗೆ ನಾರಣಪ್ಪ ನಾಲ್ಕು ಸಂಧಿಗಳನ್ನೇ ಮೀಸಲಾಗಿಡುತ್ತಾನೆ. ಪಂಪನ ಕಾವ್ಯವನ್ನು ಓದುವಾಗ, ಓದುಗರು ಮೈಯೆಲ್ಲಾ ಕಣ್ಣಾಗಿ ಎಚ್ಚರಗೊಂಡಿರಬೇಕು; ನಿಂತು ನಿಂತು ಕಾವ್ಯರಸವನ್ನು ಚಪ್ಪರಿಸುತ್ತಾ ನಿಧಾನವಾಗಿ ಸಾಗಬೇಕು. ನಾರಣಪ್ಪನಲ್ಲಿ ಈ ಕಷ್ಟವಿಲ್ಲ. ಅರ್ಧ ಮೈಮರೆತು ಕೇಳುತ್ತಿದ್ದರೂ, ಕಥಾಸರಣಿಯನ್ನು ಅನುಸರಿಸಿಕೊಂಡು ಹೋಗಬಹುದು. ವಾಚಾಳಿಯಾದ ಈತ ಅನೇಕವೇಳೆ ಮೇರೆಮೀರಿ ಮಾತಾಡುವುದೂ ಉಂಟು. ಇದರಿಂದ ಗಾಂಭೀರ್ಯಕ್ಕೆ ಲೋಪ ತರುವುದೂ ಉಂಟು. ಪಂಪ ತನ್ನ ಗಾಂಭೀರ್ಯಕ್ಕೆಎಲ್ಲಿಯೂ ಲಾಘವವನ್ನು ತಂದುಕೊಂಡಿಲ್ಲ.

ಪಂಪಕವಿ ತನ್ನ ಕಾವ್ಯ ಶಕ್ತಿಯನ್ನು ಎರಡು ಕವಲುಗಳಾಗಿ ಒಡೆದು ಪ್ರವಹಿಸಿದ. 'ಬೆಳಗುವೆನಿಲ್ಲಿ ಲೌಕಿಕಮುನ್'

ಎಂದು ಭಾರತವನ್ನೂ, ಧರ್ಮಧ್ವಜವನ್ನು ಎತ್ತಿ ಹಿಡಿಯುವೆನೆಂದು ' ಆದಿ ಪುರಾಣ ' ವನ್ನೂ ಬರೆದ. ಇದರಿಂದ ಕಾವ್ಯವನ್ನು ಮುಗಿಲು ಮುಟ್ಟಿಸಲು ಸಹಾಯಕವಾಗಿದ್ದ ಧರ್ಮದೃಷ್ಟಿ, ದರ್ಶನ ಆತನ ಭಾರತಕ್ಕೆ ದೊರೆಯದಂತಾಯಿತು. ಆತನ ಕಾವ್ಯಗಂಗೆ ತುಂಬುಸೊರೆಯಿಂದ ಭೋರ್ಗರೆಯುತ್ತಾ ಪ್ರವಹಿಸುತ್ತಿದ್ದರೂ, ಮುಳುಗಿ ನೋಡಿದರೆ ಆಳ ಕಡಿಮೆಯೆಂಬಂತಾಯಿತು. ನಾರಣಪ್ಪ ತನ್ನ ಶಕ್ತಿ ಸರ್ವಸ್ವವನ್ನೂ ಒಂದು ಕಾವ್ಯ ಸೃಷ್ಟಿಗಾಗಿಯೇ ಮೀಸಲಾಗಿರಿಸಿದ. ಆತನ ಕಾವ್ಯಶಕ್ತಿಯೂ ಧರ್ಮಶಕ್ತಿಯೂ ಹುರಿಗೊಂಡೇ ಹೊರಹೊಮ್ಮಿದುವು. ಇದರಿಂದ ಆತನ ಕಾವ್ಯ ಒಂದು ಅಲೌಕಿಕವಾದ ತೇಜಸ್ಸಿನಿಂದ ಬೆಳಗುವಂತಾಯಿತು. ಜೈನಮತದ ತತ್ವಗಳನ್ನು ಬೌದ್ಧಿಕವಾಗಿ ಒಪ್ಪಿದ ಪಂಪನಿಗೆ ಇದು ಪರಧರ್ಮದ ಕಾವ್ಯವೆಂಬ ದೃಷ್ಟಿ ಹುಟ್ಟದೆ ಹೋಗಿದ್ದರೆ—ಇದು ಬರಿಯ ಲೌಕಿಕಕಾವ್ಯವೆಂದು ಅಂದುಕೊಳ್ಳದಿದ್ದರೆ—ಆತನಿಗಿದ್ದ ಅದ್ಭುತ ಕವಿತಾಶಕ್ತಿಯಿಂದ ಅದೆಂತಹ ಮಹಾಕಾವ್ಯ ಉದಿಸುತ್ತಿತ್ತೊ ! ಬಹುಶಃ ಮಿಲ್ಟನ್, ಡಾಂಟೆ, ಷೇಕ್ಸ್‌ಪಿಯರ್, ವ್ಯಾಸ, ವಾಲ್ಮೀಕಿಗಳಂತೆ ಆತನೂ ವಿಶ್ವಸಾಹಿತಿಯಾಗುತ್ತಿದ್ದನೆಂದು ಕಾಣುತ್ತದೆ. ನಾರಣಪ್ಪನನ್ನು ಪಂಪ ಕವಿಯೊಡನೆ ಹೋಲಿಸುವಾಗ ಈ ಪ್ರಮುಖವಾದ ವ್ಯತ್ಯಾಸವನ್ನು ಮರೆಯಬಾರದು. ನಾರಣಪ್ಪ, ಭಕ್ತಿರಸಾವೇಶದಿಂದ ಮೈಮರೆತು ಮುಗಿಲು ಮುಟ್ಟುವಂತೆ ಬರೆದಿರುವ ಭಾಗಗಳಿಗೆ ಹೋಲಿಸಲು ಕನ್ನಡ ಸಾಹಿತ್ಯದಲ್ಲಿ ಮತ್ತೊಂದು ಕಾವ್ಯವಿಲ್ಲವೆಂದು ತೋರುತ್ತದೆ.

## ೪. ಇತರ ಭಾರತ ಕರ್ತೃಗಳು

ಪಂಪ-ನಾರಣಪ್ಪ ಈ ದಿವ್ಯ ಕವಿಗಳೇ ಅಲ್ಲದೆ, ಇತರ ಕವಿಗಳೂ ಕನ್ನಡ ಭಾರತದ ಸೃಷ್ಟಿಗೆ ಕೈಹಾಕಿದ್ದಾರೆ. ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ 'ವ್ಯಾಸಮುನೀಂದ ರುಂದ್ರವಚನಾಮೃತ ವಾರ್ಧಿಯನೀಸುವೆಂ; ಕವಿ ವ್ಯಾಸನೆನೆಂಬ ಗರ್ವಮೆನಗಿಲ್ಲ' ಎಂದು ಹೇಳಿ ತನಗಿಂತಲೂ ಹಿಂದೊಬ್ಬ 'ಕವಿ ವ್ಯಾಸ' ನಿದ್ದನೆಂದು ಸೂಚಿಸಿದ್ದಾನೆ. ಆದರೆ ಪಂಪನ ಕಾವ್ಯ ಅದರ ಹಿಂದಿನ ಕಾವ್ಯಗಳನ್ನೆಲ್ಲಾ ಇಕ್ಕಿ ಮೆಟ್ಟಿದುದರಿಂದ ಅವನಿಗಿಂತಲೂ ಹಿಂದೆ ಬರೆದಿದ್ದ ಭಾರತ ಹೇಳಹೆಸರಿಲ್ಲ ದಂತಾಗಿದೆ·

ಪಂಪ ನಾರಣಪ್ಪ-ಇವರ ಪ್ರತಿಭೆಯಿಂದ ಉದಿಸಿದ ಕಾವ್ಯ ಗಳ ಕಾಂತಿಯಿಂದ ಇತರ ಭಾರತಗಳು ಮಂಕಾಗಿ ಹೋಗಿವೆ. ಕ್ರಿ. ಶ. ೧೫೦೦ರಲ್ಲಿ ಚಾಟು ವಿಠಲನಾಥನು ಒಂದು ಭಾರತ ವನ್ನು ಬರೆದನೆಂದು ಪ್ರತೀತಿ ಇದೆ. ಅದರಲ್ಲಿ ಪೌಲೋಮ, ಆಸ್ತಿಕ ಪರ್ವಗಳು ಮಾತ್ರ ಈಗ ಉಪಲಬ್ಧವಾಗಿವೆ. ಕ್ರಿ. ಶ. ೧೫೫೦ರ ಸುಮಾರಿನಲ್ಲಿ, ಸುಕುಮಾರ ಭಾರತಿ 'ಚಾಮುಣಿ ಭಾರತ ವೆಂಬ ಒಂದು ಭಾರತವನ್ನು ಬರೆದಿರುವಂತೆ ಗೊತ್ತಾಗುತ್ತದೆ. ಆದರೆ ಅದರಲ್ಲಿ ಎರಡು ಆಶ್ವಾಸಗಳು ಮಾತ್ರ ಅರೆಜೀವದಿಂದ ಉಳಿದುಕೊಂಡಿವೆ. ನಾರಣಪ್ಪನು ಬರೆಯದೆ ಬಿಟ್ಟ ಉತ್ತರ ಭಾಗವನ್ನು (ಶಾಂತಿಪರ್ವದಿಂದ ಮುಂದಿನ ಏಳು ಪರ್ವಗಳ ನ್ನು) ವಿಜಯನಗರದ ಕೃಷ್ಣದೇವರಾಯನ ಅಪ್ಪಣೆಯಂತೆ ತಿಮ್ಮಣ್ಣ ಕವಿ (ಕ್ರಿ. ಶ. ೧೫೧೫) ರಚಿಸಿದ್ದಾನೆ. ಶ್ರೀನಿವಾಸ ಕವಿ (ಕ್ರಿ. ಶ. ೧೭೦೦) ಭಾರತದ ಸ್ತ್ರೀಪರ್ವವನ್ನೂ, ಲಕ್ಷ್ಮ

ಕವಿ(ಕ್ರಿ. ಶ.೧೭೨೩) ಕರ್ಣಪರ್ವದಲ್ಲಿ ನಾಲ್ಕು ಸಂಧಿಗಳ: ಸೇರಿ ಮೊದಲ ಎಂಟು ಪರ್ವಗಳನ್ನೂ, ಪರಮದೇವ (ಕ್ರಿ. ಶ ೧೭೭೭) ತುರಂಗ ಭಾರತವನ್ನೂ ರಚಿಸಿದರು. ಚಿತ್ರಭಾರತ ವೆಂಬ ಭಾರತವೂ ಕಳಲೆ ನಂಜರಾಜನು ಬರೆದಿರುವನೆಂದು ಪ್ರತೀತಿ ಇರುವ ಭಾರತವೂ ಉಪಲಬ್ಧವಾಗಿಲ್ಲ.

ಮೇಲೆ ಹೇಳಿದ ಭಾರತಗಳೆಲ್ಲವೂ ಪದ್ಯರೂಪದಲ್ಲಿವೆ. ಇವುಗಳಲ್ಲದೆ ಚಿಕ್ಕದೇವರಾಜ ಭಾರತವೆಂಬ ಉತ್ತರಪರ್ವಗಳ ಟೀಕೆಯನ್ನು ಒಳಗೊಂಡ ಭಾರತವೂ, ಜಕ್ಕಭೂಪಾಲನ (ಕ್ರಿ. ಶ. ೧೬೨೦) 'ಭಾರತ ಕಥಾಸಂಗ್ರಹ' ವೂ, ಮಧ್ವ ಗುರು ರಚಿತವಾದ ಭಾರತ ತಾತ್ಪರ್ಯನಿರ್ಣಯಕ್ಕೆ ವಾದಿ ರಾಜರು (ಕ್ರಿ. ಶ. ೫೭೦) ಬರೆದಿರುವ ಕನ್ನಡ ವ್ಯಾಖ್ಯಾನವೂ, ಮುಮ್ಮಡಿ ಕೃಷ್ಣರಾಜಒಡೆಯರು (ಕ್ರಿ. ಶ. ೧೭೯೪—೧೮೬೮) ಬರೆದಿರುವ ಕೃಷ್ಣರಾಜ ವಾಣೀವಿಲಾಸ ಭಾರತವು ಗದ್ಯಗ್ರಂಥ ಗಳಾಗಿವೆ. ಇವುಗಳಲ್ಲಿ 'ಕೃಷ್ಣರಾಜ ವಾಣೀವಿಲಾಸ ಭಾರತ'ವು ಸರ್ವ ಜನಾದರಣೀಯವಾದುದು; ಸಂಸ್ಕೃತ ಭಾರತವನ್ನು. ಆದ್ಯಂತವಾಗಿ ಕನ್ನಡಿಸತಕ್ಕದು; ಸರಳವಾದ ಕನ್ನಡದಲ್ಲಿ ಸುಂದರವಾದ ಶೈಲಿಯಲ್ಲಿ ಬರೆದಿರತಕ್ಕದು. ದೇವ ಶಿಖಾಮಣಿ ಅಳಸಿಂಗಾಚಾರ್ಯರಿಂದ ರಚಿತವಾದ ಗದ್ಯ ಭಾರತವನ್ನು ಬಿಟ್ಟರೆ, ಕನ್ನಡದಲ್ಲಿರುವ ಮತ್ತಾವ ಭಾರತವೂ ಇಷ್ಟು ವಿಸ್ತಾರ ವಾಗಿ ಬರೆಯಲ್ಪಟ್ಟಿಲ್ಲ. ವೈದಿಕ ಪಂಥದವರು ಬರೆದಿರುವ ಕಥೆ ಯನ್ನುಕೆಲವು ಜೈನ ಕವಿಗಳು ಅಲ್ಲಲ್ಲಿ ಹಲವು ವ್ಯತ್ಯಾಸಗಳನ್ನು ಮಾಡಿ ಬಳಸಿಕೊಂಡಿದ್ದಾರೆ. ಅಂತಹವುಗಳಲ್ಲಿ ಸಾಳ್ವನು (ಕ್ರಿ. ಶ. ೧೫೫೦)ಬರೆದಿರುವ ಭಾರತ ಬಹಳ ಪ್ರಸಿದ್ಧವಾದುದು. ಇದಲ್ಲದೆ 'ಜಿನಭಾರತ' ವೆಂಬ ಮತ್ತೊಂದು ಭಾರತವೂ ಇದೆ.

ಆದರೆ ಇವು ಹೆಚ್ಚು ಜನಾನುರಾಗವನ್ನು ಸಂಪಾದಿಸಲು ಶಕ್ತವಾಗಿಲ್ಲ. ಸಂಪ್ರದಾಯ ಬದ್ಧವಾದ ಕಥೆಯಲ್ಲಿ ಮಾಡಿಕೊಂಡಿರುವ ಬದಲಾವಣೆಗಳು ಒಂದು ಬಗೆಯ ವಿಲಕ್ಷಣವಾದಂತಾಗಿವೆಯಲ್ಲದೆ, ಕಲಾದೃಷ್ಟಿಯಿಂದಲೂ ಆ ಬದಲಾವಣೆಗಳು ಅಷ್ಟು ನಿರ್ದುಷ್ಟವಾಗಿವೆಯೆಂದು ಹೇಳುವಂತಿಲ್ಲ.

ಇದಲ್ಲದೆ ಈಚೆಗೆ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಸಂಸ್ಕೃತ ಮಹಾಭಾರತದ ಸಾರವನ್ನು ಭಟ್ಟಿಯಿಳಿಸಿ 'ವಚನ ಭಾರತ'ವೆಂಬ ಗದ್ಯ ಗ್ರಂಥವನ್ನು ಪ್ರಕಟಿಸಿದ್ದಾರೆ. ಆರು ತಿಂಗಳಲ್ಲಿ ಬರೆದ ಗ್ರಂಥ ಇದು. ಒಂದೇ ನೋಟದಲ್ಲಿ ಭಾರತದ ಕಥೆ, ಅದರ ಸಾಹಿತ್ಯದ ಸೊಬಗು, ದರ್ಶನ, ಧರ್ಮ, ನೀತಿ ಇವೆಲ್ಲ ಇಲ್ಲಿ ದೊರಕುತ್ತವೆ. ಈ ಗ್ರಂಥಕ್ಕೆ ವಿದ್ವತ್ ಪೂರ್ಣವಾದ ಮುನ್ನುಡಿ ಇದೆ.

ಭಾರತದ ಕಥಾಭಾಗವನ್ನು ವಸ್ತುವನ್ನಾಗಿ ಸ್ವೀಕರಿಸಿರುವ ನೂರಾರು ಕಾವ್ಯಗಳಿವೆ. ಅದಲ್ಲದೆ ಕೃಷ್ಣನನ್ನು ಕಥಾನಾಯಕನನ್ನಾಗಿ ಆಯ್ದುಕೊಂಡು ಬರೆದಿರುವ ಕಾವ್ಯಗಳಲ್ಲೆಲ್ಲಾ ಭಾರತದ ಕಥೆ ಅಷ್ಟು ಇಷ್ಟು ಬರುವುದು ಅನಿವಾರ್ಯ. ಆದರೆ ಈ ಕಾವ್ಯಗಳಲ್ಲಿ ಯಾವುವೂ ಪಂಪ ನಾರಣಪ್ಪ ಇವರ ಕಾವ್ಯಗಳಿಗೆ ಸಮಾನವಾಗುವಂತಿಲ್ಲ. ಅವರಿಬ್ಬರೂ ಸೂರ್ಯ ಚಂದ್ರರಂತೆ ಸಾಹಿತ್ಯಾಕಾಶದಲ್ಲಿ ಸ್ಥಾಯಿಯಾಗಿರುವವರು.

ಇವುಗಳಲ್ಲದೆ ಭೀಮ-ದುರ್ಯೋಧನರ ಗದಾಯುದ್ಧವನ್ನು ವರ್ಣಿಸುವ ರನ್ನಮಹಾಕವಿಯ 'ಗದಾಯುದ್ಧಂ' ಕಿರಾತಾರ್ಜುನೀಯ ಪ್ರಸಂಗವನ್ನು ವರ್ಣಿಸುವ ಷಡಕ್ಷರಿಯ 'ಶಬರಶಂಕರವಿಲಾಸಂ' ಪಾಂಡವರ ಅಶ್ವಮೇಧಯಾಗವನ್ನು ವರ್ಣಿಸುವ ಲಕ್ಷ್ಮೀಶನ 'ಜೈಮಿನಿ ಭಾರತ' ಇವು ಪ್ರೌಢವೂ ಆದರೂ ಜನಪ್ರಿಯವೂ ಆದ ಕಾವ್ಯಗಳಾಗಿವೆ.

# ವಿರಾಟಪರ್ವದ ಕಥೆ.

ವನವಾಸದ ಹನ್ನೆರಡು ವರ್ಷಗಳು ಉರುಳಿಹೋದವು. ಇನ್ನು ಅಜ್ಞಾತವಾಸದಲ್ಲಿ ಒಂದು ವರುಷದ ಅವಧಿಯನ್ನು ಸವೆಸಬೇಕಾಗಿದೆ. ಅದಕ್ಕೆ ತಕ್ಕ ಸ್ಥಳವಾವುದು ? ಬಡಗಣ ದಿಕ್ಕೆಲ್ಲವೂ ಕೌರವರ ಸಾಮ್ರಾಜ್ಯ ; ಅಲ್ಲಿ ಮೈಮರೆಸಿಕೊಂಡು ಬಾಳುವುದು ಕಷ್ಟ. ಮೂಡಣ ಅರಸರೊ, ಆ ಕೌರವರ ಗೆಳೆಯರು. ತೆಂಕ ದಿಕ್ಕಿನ ಅರಸರೆಲ್ಲರೂ ಪಾಂಡವರಿಗೆ ಚಿರಪರಿಚಿತರು ; ಅಲ್ಲದೆ ಅಲ್ಲಿನ ಅಕ್ಕಪಕ್ಕದವರೆಲ್ಲರೂ ಶುದ್ಧ ಚಾಡಿಕೋರರು ; ಅವರ ಮಧ್ಯದಲ್ಲಿ ಗುಟ್ಟಾಗಿ ಜೀವಿಸುವುದು ಬಹು ಕಷ್ಟ. ಪಡುವಣ ದೊರೆಗಳು ಕೇವಲ ಅಶಕ್ತರು ; ಅಡಗಿಕೊಂಡಿರುವುದಕ್ಕೆ ಅದೂ ತಕ್ಕ ಸ್ಥಳವಲ್ಲ. ಹೀಗಾಗಿ ತಲೆ ಮರೆಸಿಕೊಂಡಿರಲು ತಕ್ಕ ಸ್ಥಳವೇ ತೋಚಲೊಲ್ಲದು, ಧರ್ಮರಾಯನಿಗೆ. ಆತನು ತಮ್ಮಂದಿರಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿದನು. ಆಗ ಅರ್ಜುನನು ಪಡುವಣ ದಿಕ್ಕಿನ ಅರಸರು ಅಶಕ್ತರಾದರೂ ಅದೇ ತಮಗೆ ಶ್ರೇಯಸ್ಕರವಾದ ಸ್ಥಳವೆಂದು ಸೂಚಿಸಿದನು. ಅಲ್ಲಿನ ದೊರೆಯಾದ ವಿರಾಟನಿಗೆ ಕೀಚಕನ ಬೆಂಬಲವಿದ್ದುದರಿಂದ ಆತನು ದುರ್ಜಯನಾಗಿದ್ದನು. ಕೌರವರ ಆಟವೇನೂ ಅಲ್ಲಿ ಸಾಗುವಂತಿರಲಿಲ್ಲ. ಆದ್ದರಿಂದ ಪಾಂಡವರು ತಮ್ಮ ಅಜ್ಞಾತವಾಸವನ್ನು ನಿರ್ಭಯವಾಗಿ ಅಲ್ಲಿ ಕಳೆಯಬಹುದಾಗಿತ್ತು. ಈ ಸೂಚನೆ ಎಲ್ಲರಿಗೂ ಒಪ್ಪಿಗೆಯಾಯಿತು. ವೇಷಾಂತರದಿಂದ ಒಬ್ಬೊಬ್ಬರಾಗಿ ವಿರಾಟನಗರಿಯನ್ನು ಸೇರಬೇಕೆಂದು ನಿಶ್ಚಯಿಸಿಕೊಂಡರು. ತಮ್ಮ ಆಯುಧಗಳನ್ನೆಲ್ಲಾ ಒಂದು ಚರ್ಮದಲ್ಲಿ ಹೆಣದ ಆಕಾರವಾಗುವಂತೆ ಬಿಗಿದು ಕಟ್ಟಿ,

ವಿರಾಟನಗರದ ಸಮೀಪದಲ್ಲಿ ಬನ್ನಿಯ ಮರವೊಂದರ ಮೇಲೆ ಬಚ್ಚಿಟ್ಟರು.

ಮೊದಲು ಧರ್ಮರಾಯನು ಯತಿವೇಷದಿಂದ ಪುರಪ್ರವೇಶ ಮಾಡಿದನು. ಆತನ ತೇಜಃಪುಂಜಮೂರ್ತಿಯನ್ನು ಕಂಡು ಬೀದಿಯ ಜನರೆಲ್ಲರೂ ಭಯಭಕ್ತಿಯಿಂದಪೊಡಮಟ್ಟರು. ಆತನ ಆಗಮನವನ್ನು ಕೇಳಿ ಸ್ವತಃ ವಿರಾಟನೇ ಆತನನ್ನು ಇದಿರುಗೊಂಡು ಸಕಲ ಮರ್ಯಾದೆಗಳೊಡನೆ ಅರಮನೆಗೆ ಕರೆದೊಯ್ದನು. ಅಲ್ಲಿ ಆ ಯತಿ ವೇಷಧಾರಿಯು ತಾನು ಪಾಂಡವರ ಬಳಿಯಲ್ಲಿದ್ದುದಾಗಿಯೂ, ಅವರು ವನವಾಸಕ್ಕೆ ಹೋದುದರಿಂದ ಉದರಂಭರಣಕ್ಕಾಗಿ ಆಶ್ರಯವನ್ನು ಹುಡುಕುತ್ತಾ ಬಂದುದಾಗಿಯೂ, ತನ್ನ ಹೆಸರು ಕಂಕನೆಂಬುದಾಗಿಯೂ ಹೇಳಿಕೊಂಡನು. ರಾಜನು ಅದನ್ನು ನಿಜವೆಂದು ನಂಬಿ ಆತನನ್ನು ತನ್ನ ಬಳಿಯಲ್ಲಿಯೇ ಇಟ್ಟುಕೊಂಡನು. ಇದಾದ ಒಂದೆರಡು ದಿನಗಳಲ್ಲಿ ಭೀಮನು ವಲಲನೆಂಬ ಹೆಸರಿನಿಂದ ಪುರಪ್ರವೇಶ ಮಾಡಿ ರಾಜನನ್ನು ಕಾಣಿಸಿಕೊಂಡನು. "ನಾನು ಪಾಕಶಾಸ್ತ್ರದಲ್ಲಿ ಪ್ರವೀಣ; ಮಲ್ಲ ವಿದ್ಯೆಯಲ್ಲಿಯೂ ಪರಿಚಯವಿದೆ. ಭೀಮನ ಬಳಿಯಲ್ಲಿ ಬಾಣಸಿಗನಾಗಿದ್ದೆ" ಎಂದು ಹೇಳಿಕೊಂಡು ವಿರಾಟನ ಪಾಕಶಾಲೆಗೆ ಅಧಿಕಾರಿಯಾದನು. ಅರ್ಜುನನು ಹಿಂದೆ ಊರ್ವಶಿಯು ತನಗೆ ಕೊಟ್ಟಿದ್ದ ಶಾಪದಿಂದ ಈಗ ನಪುಂಸಕನಾಗಿ ಬೃಹನ್ನಳೆಯೆಂಬ ಹೆಸರಿನಿಂದ ರಾಣೀವಾಸದಲ್ಲಿ ನಾಟ್ಯವಿದ್ಯಾಗುರುವಾದನು. ನಕುಲ ಸಹದೇವರು ಕುದುರೆಗಳನ್ನು ದನಗಳನ್ನು ಕಾಯುವವರಾದರು. ಕಡೆಯದಾಗಿ, ದ್ರೌಪದಿ ಸೈರಂಧ್ರಿ ವೇಷದಿಂದ ಪುರಪ್ರವೇಶ ಮಾಡಿ ಮಹಾರಾಣಿಯಾದ ಸುದೇಷ್ಣೆಯಲ್ಲಿ ಆಶ್ರಯ ಪಡೆದಳು. ವಿಧಿಮಹಿಮೆ

ಎಂತಹುದೊ? ಜಗತ್ತಿನ ರಾಜರೆಲ್ಲರೂ ಅವನತಮಸ್ತಕರಾಗಿ ಸೇವೆ ಮಾಡುತ್ತಿದ್ದ ಪಾಂಡವರು ಈಗ ಯಃಕಶ್ಚಿತ ವಿರಾಟನಲ್ಲಿ ಸೇವಾವೃತ್ತಿಯನ್ನು ಕೈಕೊಂಡು ಜೀವಿಸಬೇಕಾಯಿತು. "ಕಾಲಾಯ ತಸ್ಮೈ ನಮಃ."

ಪಾಂಡವರ ಅಜ್ಞಾತವಾಸ ಸಾಂಗವಾಗಿ ಮುಂದುವರೆಯುತ್ತಿತ್ತು. ಹೀಗಿರುವಾಗ ಸುದೇಷ್ಣಾದೇವಿಯ ತಮ್ಮನಾದ ಕೀಚಕನು ಒಮ್ಮೆ ಅಕ್ಕನನ್ನು ನೋಡುವುದಕ್ಕಾಗಿ ಅರಮನೆಗೆ ಬಂದನು. ತನ್ನ ಭುಜಬಲದಿಂದ ಸುಪ್ರಸಿದ್ಧನಾಗಿದ್ದ ತಮ್ಮನನ್ನು ರಾಣಿಯು ಅತ್ಯಂತ ಗೌರವದಿಂದ ಕಂಡು, ಸಿಂಹಾಸನದಲ್ಲಿ ಕುಳ್ಳಿರಿಸಿ, ಆದರೋಪಚಾರಗಳನ್ನು ನಡೆಸಿದಳು. ಈ ಸತ್ಕಾರದಿಂದ ಸಂತುಷ್ಟನಾಗಿ ಕುಳಿತಿದ್ದ, ಆತನ ಕಣ್ಣಿಗೆ ಸೈರಂಧ್ರಿ ವೇಷದ ದ್ರೌಪದಿ ಕಾಣಿಸಿದಳು. ಆಕೆಯ ಅನುಪಮಲಾವಣ್ಯವನ್ನು ಕಂಡ ಆ ಕಣ್ಣುಗಳು ಅಲ್ಲಿಯೇ ನಾಟಿಹೋದವು. ಅದರೊಡನೆ ಆತನ ಹೃದಯದಲ್ಲಿ ಮನ್ಮಥನ ಮೊನಚಾದ ಬಾಣಗಳು ಆಳವಾಗಿ ನಾಟಿಕೊಂಡವು. ಜಗತ್ತಿನ ಮಾನವಮೃಗಗಳನ್ನೆಲ್ಲಾ ಕೆಡಹಲು ಬ್ರಹ್ಮನು ಒಡ್ಡಿದ ಬಲೆಯಂತೆ ಇದ್ದ ಆ ಮೋಹನಮೂರ್ತಿಯನ್ನು ಕಂಡು ಕೀಚಕನಿಗೆ ಧರ್ಮಾಧರ್ಮಗಳ ವಿವೇಚನೆ ಇಲ್ಲದಂತಾಯಿತು. ನಾಚಿಕೆ ಹೇಸಿಕೆಯೆಂಬುದು ಹಾರಿಹೋಯಿತು. ತನ್ನ ಘನತೆ ಗಾಂಭೀರ್ಯಗಳೊಂದನ್ನೂ ಗಮನಿಸದೆ, ತನ್ನ ಕಣ್ಣುಗಳಿಂದಲೇ ಆ ಹೆಣ್ಣನ್ನು ನುಂಗಿ ಹೃದಯದಲ್ಲಿ ಸೆರೆಗೆಯ್ಯುವವನಂತೆ ಅವಳನ್ನು ನೋಡುತ್ತಾ, ರಾಣಿಯನ್ನು ಕುರಿತು "ಅಕ್ಕಾ! ನಿನ್ನ ಓಲೆಕಾತಿಯರನ್ನೆಲ್ಲಾ ಮೀರಿಸಿರುವ ಈ ಮನೋಹರಿ ಯಾರು?" ಎಂದು ಬಾಯ್ಬಿಟ್ಟು ಕೇಳಿದನು. ಆಗ ರಾಣಿಯು "ಅಯ್ಯಾ, ಈಕೆ

ಗಂಧರ್ವ ರಮಣಿ, ಕಾರಣಾಂತರದಿಂದ ನಮ್ಮ ಆಶ್ರಯದಲ್ಲಿದ್ದಾಳೆ. ಈಕೆಯನ್ನು ನಾವು ಕೇವಲ ಗೌರವದಿಂದ ನಡಸಿಕೊಂಡು ಬರುತ್ತಿದ್ದೇವೆ. ಈಕೆಯ ಗಂಡಂದಿರು ಮಹಾಶೂರರು. ಆದ್ದರಿಂದ ಈಕೆ ನಿನಗೆ ದಕ್ಕುವಂತಹಳಲ್ಲ." ಎಂದಳು.

ಸುದೇಷ್ಣೆಯ ಮಾತುಗಳಿಂದ ಕೀಚಕನು ತಾತ್ಕಾಲಿಕವಾಗಿ ಸುಮ್ಮನೆ ಹೊರಟುಹೋದರೂ ಆತನ ಮನಸ್ಸು ಸೈರಂಧ್ರಿಯಲ್ಲಿ ನಟ್ಟು ಬೇರ್ವರಿಯಿತು. ಮನ್ಮಥನ ಕೂರ್ಗಣೆಗಳಿಂದ ವೈಮನಸ್ಸುಗಳೆರಡೂ ಘಾಸಿಯಾಗಿಹೋದವು. ಮನಸ್ಸನ್ನು ಬಿಗಿಹಿಡಿಯಲಾರದೆ ಮರುದಿನ ಬೆಳಗಾಗುತ್ತಲೇ ಅಕ್ಕನ ಅರಮನೆಯ ಬಳಿಗೆ ಧಾವಿಸಿ ಬಂದನು. ಬಾಗಿಲಿನಲ್ಲಿಯೇ ಸೈರಂಧ್ರಿಯು ನಿಂತಿದ್ದಳು. ಅವಳನ್ನು ಕೂಗಿಕರೆಯುತ್ತಾ "ಸೈರಂಧ್ರಿ, ಮನ್ಮಥನಿಂದಾದ ಗಾಯಗಳಿಗೆ ತಕ್ಕ ಮದ್ದನ್ನು ಬಲ್ಲವಳು ನೀನೊಬ್ಬಳೇ. ದಯವಿಟ್ಟು ನನ್ನನ್ನು ಬದುಕಿಸಿಕೋ. ನಿನ್ನ ಚೆಲ್ಲಗಂಗಳನ್ನು ನನ್ನ ಮುಖದ ಮೇಲೆ ಚೆಲ್ಲಿ ಸಾಯುತ್ತಿರುವ ನನ್ನನ್ನು ಸಪ್ರಾಣನನ್ನಾಗಿ ಮಾಡು" ಎಂದು ಕೂಗಿದನು.

ಹಿಂದಿನ ದಿನದ ಅವನ ಚರ್ಯೆಯಿಂದಲೇ ದ್ರೌಪದಿಗೆ ಆತನ ಸ್ವಭಾವ ಸ್ವಲ್ಪಮಟ್ಟಿಗೆ ಗೋಚರವಾಗಿತ್ತು. ಈಗ ಲಜ್ಜಾಹೀನನಾಗಿ ದುರುದುಂಬಿತನದಿಂದ ಅವನಾಡಿದ ಮಾತುಗಳನ್ನು ಕೇಳಿ ಆಕೆಯ ಕೋಪ ಕೆರಳಿತು. "ದುರಾತ್ಮ, ನಿನ್ನ ವಂಶದ ಬೇರನ್ನೇ ಕೊಯ್ದುಕೊಳ್ಳುವ ಅಕಾರ್ಯಕ್ಕೆ ಏಕೆ ಪ್ರಯತ್ನಿಸುವೆ ? ಇದರಿಂದ ಪ್ರಾಪ್ತವಾಗುವ ಅಪಕೀರ್ತಿಗೆ ಹೇಸಬೇಡವೆ ? ಅದು ಹೋಗಲಿ ; ಹೀಗೆ ಕಾತರದಿಂದ ಕೆಟ್ಟ ಮಾತುಗಳನ್ನಾಡಿ ನನ್ನ ಪತಿಗಳಿಂದ ಮೃತ್ಯು ಮುಖನಾಗುವುದನ್ನಾದರೂ ಗಮನಿಸಬೇಡವೆ ? " ಎಂದಳು. ಈ ಬೆದರಿಕೆ ಕೀಚ

ಕನ ಅವಿವೇಕಕ್ಕೆ ಅಡ್ಡಗಟ್ಟೆಯಾಗುವಂತಿರಲಿಲ್ಲ. ಅವನಿಗೆ ಯಾರ ಭಯವೂ ಇಲ್ಲ. 'ಬಡವರ ಕೋಪ ದವಡೆಗೆ ಮೃತ್ಯು' ಎಂಬಂತೆ ನಿನ್ನ ಗಂಡಂದಿರ ಕೋಪ ಅವರ ಕೊಬ್ಬನ್ನು ಇಳಿಸೀತು. ಆ ವಿಚಾರ ಈಗ ಅಗತ್ಯವಿಲ್ಲ. ಕಾಮನ ಕೂರಲಗು ನನ್ನನ್ನು ಕೊಲ್ಲುತ್ತಿದೆ. ನೀನು ನನ್ನನ್ನು ವರಿಸಲೇಬೇಕು. ಸಾಯುವವುನ್ನ ನಿನ್ನಲ್ಲಿ ನೆರದೇಸಾಯುವೆನು; ಇದು ನಿಶ್ಚಯ. ಆದರೆ, ನೀನಾಗಿಯೇ ಕೃಪೆಮಾಡಿ ನನ್ನ ಜೀವವನ್ನು ಉಳಿಸಿದರೆ ಉಭಯರಿಗೂ ಕ್ಷೇಮ." ಎಂದು ಈತನು ಅವಾಚ್ಯನುಡಿಗಳನ್ನು ನುಡಿಯಲು ಅದರಿಂದ ಅಸಹ್ಯಗೊಂಡ ದ್ರೌಪದಿ "ಎಲವೋ, ನಾಯಿ ಸಿಂಹಿಣಿಯನ್ನು ಬಯಸುವುದುಂಟೇ? ಛಿ, ಮೂರ್ಖ ಹೋಗತ್ತ" ಎಂದು ಹೇಳಿ ಅರಮನೆಯೊಳಕ್ಕೆ ಹೊರಟು ಹೋದಳು.

ದ್ರೌಪದಿ ನಿವಾರಿಸಿದಷ್ಟು ಕೀಚಕನ ಕಾಮ ಕಳಿಯೇರುತ್ತಾ ಹೋಯಿತು. ಅವಳ ಸೌಂದರ್ಯಕ್ಕೆ ಆ ಪಾಪಿಯ ಮನಸ್ಸೆಲ್ಲವೂ ಸೂರೆಯೋಗಿತ್ತು. ಅವಳ ವಿರಹದಿಂದ ಅವನು ಶಕ್ತಿಗುಂದಿದನು; ಬುದ್ಧಿ ಕದಡಿಹೋಯಿತು. ಜೋಲುಮೋರೆ ಹಾಕಿಕೊಂಡು ಅಕ್ಕನ ಬಳಿಗೆ ಹೋದನು. ಅವನ ಹೆಣಮುಸುಡನ್ನು ಕಾಣುತ್ತಲೇ ಆಕೆಗೆ ವಿಷಯ ಸ್ವಲ್ಪಮಟ್ಟಿಗೆ ಅರ್ಥವಾದಂತಾಯಿತು. ಈ ಪಾಪಿ ಆ ಸುಂದರಿ ಸೈರಂಧ್ರಿಯನ್ನು ಕೆಣಕಿ ವಂಶ ನಾಶಮಾಡಿಕೊಳ್ಳುತ್ತಾನಲ್ಲ ಎಂದುಕೊಂಡು, ಆಕೆ ಅವನನ್ನು ಕುರಿತು "ಮಗು, ನಿನ್ನ ಮುಖಕಾಂತಿ ಏಕೆ ಕುಂದಿತು?" ಎಂದು ಕೇಳಿದಳು. ಮನ್ಮಥನ ಬಾಣ ಅವನ ಸದ್ಬುದ್ಧಿಯನ್ನು ಸೀಳಿ ಹಾಕಿದ್ದುದರಿಂದ ಕೀಚಕನು ನಿರ್ಲಜ್ಜನಾಗಿ ಹೇಳಿದನು—"ಅಕ್ಕಾ, ಚೆಲು

ವೆಯಲ್ಲಿ ಚೆಲುವೆಯಾದ ನಿನ್ನ ಸೈರಂಧ್ರಿ ನನ್ನನ್ನು ಮನ್ಮಥನಿಗೆ ಮಾರಿಬಿಟ್ಟಿದ್ದಾಳೆ. ಅವನ ಊಳಿಗಕ್ಕೆ ಸಿಕ್ಕ ನಾನು ಬದುಕುವಂತಿಲ್ಲ. ನನ್ನ ಜೀವದ ಮೇಲೆ ಆಸೆಯಿದ್ದರೆ ಸೈರಂಧ್ರಿಯನ್ನು ನನಗೆ ಒಪ್ಪಿಸು" ಎಂದನು.

ತಮ್ಮನ ಮಾತನ್ನು ಕೇಳಿ ಸುದೇಷ್ಣೆಗೆ ಮುಂದೋರದಂತಾಯಿತು. 'ಸೈರಂಧ್ರಿ ಗಂಧರ್ವರ ಪತ್ನಿಯಾದುದರಿಂದ ಅವಳ ಸಹವಾಸ ಕಷ್ಟ'—ಎಂದು ತಮ್ಮನಿಗೆ ಹೇಳಿ ನೋಡಿದಳು. "ಅವಳ ತೊಡಕೊಂದು ಬೇಡ. ನನ್ನ ರಾಣಿವಾಸದ ಯಾವ ರಮಣಿಯನ್ನು ನೀನು ಬಯಸಿದರೂ ತಕ್ಷಣವೇ ವಿವಾಹಮಾಡಿಕೊಡುತ್ತೇನೆ" ಎಂದು ಸಮಾಧಾನಮಾಡಲು ಪ್ರಯತ್ನಿಸಿದಳು. ಆದರೆ ಅದು ನಿಷ್ಫಲವಾಯಿತು. "ನನ್ನ ಜೀವ ಅವಳಲ್ಲಿ ಸಿಕ್ಕಿ ಕೊಂಡಿದೆ. ಅವಳನ್ನು ಬಿಟ್ಟು ಉಳಿದವರ ಮಾತು ನನಗೆ ಬೇಡ. ಇತರರ ರೂಪನ್ನು ನನ್ನ ಕಣ್ಣುಗಳು ಕಾಣಲಾರವು. ಇತರರ ಹೆಸರೆಂದರೇ ನನ್ನ ನಾಲಗೆಗೆ ದ್ವೇಷ. ಆದ್ದರಿಂದ ಹೇಗಾದರೂ ಮಾಡಿ ಸೈರಂಧ್ರಿಯಲ್ಲಿ ನನ್ನನ್ನು ಸೇರಿಸಿ ನನ್ನನ್ನು ಕಾಪಾಡು. ನಾನು ನಿನ್ನನ್ನು ಶರಣುಹೊಕ್ಕಿದ್ದೇನೆ." ಎಂದು ಇವನು ಅತಿ ದೀನನಾಗಿ ಬೇಡಿಕೊಂಡನು. ತಮ್ಮನ ಮಾತುಗಳನ್ನು ಕೇಳಿ ಸುದೇಷ್ಣೆಯ ಕಣ್ಣುಗಳು ಕಂಬನಿದುಂಬಿದವು. ಮೋಹದಿಂದ ತಮ್ಮನನ್ನು ವೈದಡವುತ್ತಾ ಮೇಲಕ್ಕೆಬ್ಬಿಸಿ, ಮರುದಿನ ಸೈರಂಧ್ರಿಯನ್ನು ಅವನ ಮನೆಗೆ ಕಳುಹಿಸುವುದಾಗಿ ಮಾತುಕೊಟ್ಟು, ಅವನನ್ನು ಬೀಳ್ಕೊಟ್ಟಳು. ಅಕ್ಕನ ಅಭಯವಚನದಿಂದ ಸಂತುಷ್ಟನಾದ ಕೀಚಕನು, ಮನಸ್ಸಿನಲ್ಲಿಯೇ ಮಂಡಿಗೆಯನ್ನು ಸವಿಯುತ್ತಾ ಮನೆಗೆ ಹಿಂದಿರುಗಿದನು.

ಹಗಲು ಕಳೆಯಿತು; ರಾತ್ರಿಯಾಯಿತು. ದಿಗಂಗನೆ ಇಟ್ಟ ಚಂದನದ ಬೊಟ್ಟಿನಂತೆ ಚಂದ್ರನು ಪೂರ್ವದಲ್ಲಿ ಉದಯಿಸಿದನು. ಕಾಮರೂಪದ ಕೀಚಕನು ವಿರಹ ವೇದನೆಯಿಂದ ತಳಿರ ಹಾಸಿಗೆಯಮೇಲೆ ಹೊರಳಾಡುತ್ತಾ, ಕ್ಷಣವೊಂದು ಯುಗವಾಗಿ ಆ ಇರುಳನ್ನೆಲ್ಲಾ ಕಳೆದನು. ಮರುದಿನ ಸೂರ್ಯೋದಯವಾಗುತ್ತಿದ್ದಂತೆಯೇ ಸುದೇಷ್ಣೆಯು ಸೈರಂಧ್ರಿಯನ್ನು ಕರಸಿ ತನ್ನ ತಮ್ಮನ ಮನೆಯಿಂದ ಮಧುವನ್ನು ತರುವಂತೆ ನಿಯಮಿಸಿದಳು. ಆಕೆಯು ಕೀಚಕನ ನೀಚತನವನ್ನು ಸೂಚಿಸಿ, ಆ ಕಾರ್ಯಕ್ಕೆ ಬೇರೆಯವರನ್ನು ನಿಯಮಿಸುವಂತೆ ಬೇಡಿಕೊಂಡಳಾದರೂ ಅವಳ ಪ್ರಾರ್ಥನೆಗೆ ಪುರಸ್ಕಾರ ದೊರೆಯಲಿಲ್ಲ. ಆದ್ದರಿಂದ ಅನಿವಾರ್ಯವಾಗಿ ಮನ್ಮಥನ ಮಸೆದಲಗಿನಂತಿದ್ದ ಆ ರಮಣಿ ಕೀಚಕನ ಮನೆಗೆ ಹೋಗಬೇಕಾಯಿತು. ಲಾವಣ್ಯ ಸಾಗರದಲ್ಲಿ ಹುಟ್ಟಿದ ಆ ಸೌಂದರ್ಯ ಲಕ್ಷ್ಮಿಯನ್ನು ತನ್ನ ಮನೆಯ ಬಳಿಯಲ್ಲಿ ಕಾಣುತ್ತಲೇ ಕೀಚಕನು ತಾನು ಧನ್ಯನೆಂದುಕೊಂಡನು. ಬಹಳ ಗೌರವದಿಂದ ಅವಳನ್ನು ಇದಿರುಗೊಂಡು " ರಮಣಿ ಬಾ, ಇಲ್ಲಿ ಕುಳಿತುಕೋ. ನೀನು ನನ್ನ ಸಹಾಯಕಳಾಗಿರುವಾಗ ನಾನು ಮನ್ಮಥನ ಮರುಳತನಕ್ಕೆ ಹೆದರುತ್ತೇನೆಯೆ ? ಅವನ ಚಂದ್ರ, ವಸಂತ, ಕೋಗಿಲೆ– ಇವರೆಲ್ಲರ ಸೊಕ್ಕನ್ನು ಅಡಗಿಸುತ್ತೇನೆ" ಎಂದು ಉಬ್ಬಿ ನುಡಿದನು.

ಕಾಮಿ ಕೀಚಕನ ಕೀಳುನುಡಿಗಳಿಂದ ಕೆರಳಿದ ಆ ಕೋಮಲೆ " ಎಲವೋ ಪಾಪಿ, ಅನ್ಯಾಯವನ್ನಾಡಿದರೆ ಬಾಯಲ್ಲಿ ಹುಳು ಬಿದ್ದೀತು. ಈ ಬಗೆಯಾದ ನಾಯಿತನವನ್ನು ನಡಸಬಾರದು" ಎಂದು ಆಕೆ ಹೇಳುತ್ತಿರುವಂತೆಯೇ ಕೀಚಕನು

ಮುಂಬರಿದು "ನಿನ್ನ ಬಯ್ಗುಳಿಂದ ನನಗೆ ಸ್ವಲ್ಪವೂ ನೋವಾಗವು" ಎಂದು ಹೇಳಿ ಅವಳ ಕೈಗಳನ್ನು ಹಿಡಿದುಕೊಂಡನು. ದ್ರೌಪದಿ ಒಡನೆಯೆ ಕೆರಳಿದ ಸಿಂಹಿಣಿಯಂತೆ ಕೋಪದಿಂದ ಕೈ ಕೊಸರಿಕೊಂಡು, ಕೈಲಿದ್ದ ಮಧು ಪಾತ್ರವನ್ನು ನೆಲಕ್ಕೊಗೆದು, ಅವನ ಮನೆಯಿಂದ ಹೊರಗೆ ಕಾಲಿಟ್ಟವಳೇ ಒಂದೇ ಉಸುರಿಗೆ ಓಡಿ ವಿರಾಟನ ಸಭೆಯನ್ನು ಸೇರಿದಳು. ಆದರೇನು? ಆ ಕಾಮುಕ ಅವಳನ್ನು ಬೆನ್ನಟ್ಟಿ ಬಂದು, ತುಂಬಿದ ಸಭೆಯನ್ನೂ ಲೆಕ್ಕಿಸದೆ "ಎಲೆ ತೊತ್ತಿನ ಮಗಳೆ, ಓಡಿಹೋದರೆ ಬಿಟ್ಟುಬಿಡುವೆನೆಂದುಕೊಂಡೆಯಾ?" ಎಂದು ಅವಾಚ್ಯವಾಗಿ ಬೈಯುತ್ತಾ, ಅವಳ ತುರುಬನ್ನು ಹಿಡಿದು ಕೆಳಕ್ಕೆ ಕೆಡವಿ, ಕಾಲಿನಿಂದ ಅವಳನ್ನು ಮೆಟ್ಟಿದನು. ಇದರಿಂದ ಆ ಸುಕುಮಾರಿಯ ಬಾಯಿ ಮೂಗುಗಳಲ್ಲಿ ನೆತ್ತರು ಸುರಿಯಿತು. ಬಿರುಗಾಳಿಗೆ ಮುರಿದು ಬಿದ್ದ ಬಾಳೆಯಂತೆ ಆ ಕೋಮಲೆ ಹುಡಿಯಲ್ಲಿ ಹೊರಳುತ್ತಾ, "ಅಯ್ಯೋ ದೇವರೆ, ಇದೆಂತಹ ಅನ್ಯಾಯ? ನಾಲ್ಕು ಜನರ ನಡುವೆ ಬಿದ್ದ ಹಾವು ಕೂಡ ಸಾಯದೆಂದು ಹೇಳುತ್ತಾರೆ. ಅಂತಹುದರಲ್ಲಿ ನಿರಪರಾಧಿಯಾದ ನನ್ನನ್ನು ಈ ನೀಚನು ತುಂಬಿದ ಈ ಸಭೆಯಲ್ಲಿ ಎಷ್ಟು ಸಂಕಟ ಸಂಕಟಪಡಿಸುತ್ತಿರುವನಲ್ಲಾ! ಅಬಲೆಯ ಗೋಳನ್ನು ಕೇಳುವವರೇ ದಿಕ್ಕಿಲ್ಲದಂತಾಯಿತೆ? ಈ ಸಭೆಯೆಂಬುದು ಘೋರಾರಣ್ಯವೇ ಸರಿ. ಪಾಪಿಗಳಾದ ನನ್ನ ಪತಿಗಳಿಗಾದರೂ ನನ್ನ ನಿಟ್ಟುಸಿರಿನ ಬಿಸಿ ಹೋಗಿ ತಾಗಬಾರದೆ?" ಎಂದು ಗೋಳಾಡಿದಳು.

ದ್ರೌಪದಿಯ ಈ ಗೋಳು ಸಭೆಯಲ್ಲಿ ಮಾರುವೇಷದಿಂದ ಕುಳಿತಿದ್ದ ಭೀಮಸೇನನನ್ನು ಕೆರಳಿಸಿತು. ಆತನ ಅಂತರಂಗವೆಲ್ಲಾ ಕತಕತ ಕುದಿಯಿತು. ಔಡುಗಚ್ಚಿಗೊಂಡು ಸಭಾಂಗ

ಣದ ಎದುರಿಗಿದ್ದ ದೊಡ್ಡ ಮರವೊಂದನ್ನು ಕೆಕ್ಕರಿಸಿ ನೋಡಿದನು. ಆ ನೋಟದ ಹಿಂದಿದ್ದ ಮನೋಭಾವವನ್ನು ಅರ್ಥಮಾಡಿಕೊಂಡ ಕಂಕಭಟ್ಟನು "ಅಯ್ಯಾ, ವಲಲ! ಇದು ಸಜ್ಜನರಿಗೆ ಆಶ್ರಯವಾದ ಮರ. ಇದನ್ನು ಮುರಿಯಬೇಡ. ನಿನ್ನ ಅಡಿಗೆಗೆ ಬೇಕಾದರೆ ಊರಹೋರಗಿನ ದೊಡ್ಡ ವೃಕ್ಷವನ್ನು ಬಳಸಿಕೊ" ಎಂದು ಹೇಳಿದನು. ಅಣ್ಣನ ಈ ಸಮಾಧಾನದ ನುಡಿಗಳು ಭೀಮನಿಗೆ ಹಿಡಿಸಲಿಲ್ಲ. ಅನ್ಯಾಯವನ್ನು ಕಣ್ಣಾರ ಕಾಣುತ್ತಾ ಸುಮ್ಮನಿರುವುದು ಅವನಿಗೆ ಸಾಧ್ಯವಿರಲಿಲ್ಲ. ಆದ್ದರಿಂದ ಆತನು ಆ ಸ್ಥಳವನ್ನು ಬಿಟ್ಟು ಹೊರಟುಹೋದನು. ಅನಂತರ ಕಂಕಭಟ್ಟನು ಸೈರಂಧ್ರಿಯ ಕಡೆಗೆ ತಿರುಗಿ "ಎಲೆ ಬಾಲೆ, ಇದು ನಿನ್ನ ಪೂರ್ವಾರ್ಜಿತ ಕರ್ಮ. ಈ ಕೀಚಕನನ್ನು ಶಿಕ್ಷಿಸುವ ಶಕ್ತಿ ಈ ಸಭೆಗಿಲ್ಲ. ಈತ ಮಹಾರಾಜನಿಗೆ ಹೆದರುವವನೂ ಅಲ್ಲ. ಆದ್ದರಿಂದ ನೀನು ಮೌನವಾಗಿ ಮನೆಗೆ ಹಿಂದಿರುಗು. ನಿನ್ನ ಪತಿಗಳೇನೂ ಕಾಪುರಷರಲ್ಲ. ಪತಿವ್ರತೆಯರ ಪರಮಗುರುವಿನಂತಿರುವ ನೀನು ವೃಥಾ ಪತಿನಿಂದೆಗೆ ತೊಡಗದೆ ಕ್ಷಮಾಶೀಲಳಾಗು. ಅದೇ ಈಗ ನಿನ್ನ ಧರ್ಮ" ಎಂದನು.

ಕಂಕಭಟ್ಟನ ಮಾತುಗಳನ್ನು ಕೇಳಿ ಸೈರಂಧ್ರಿಗೆ ಕಸಿವಿಸಿಯಾಯಿತು. ಆಕೆ ಆಕ್ಕಸದಿಂದ "ಅಹುದಹುದು, ಸೈರಣೆಗೂ ಒಂದು ಎಲ್ಲೆಯಿದೆ. ನೀರಿನಲ್ಲಿ ಬಿದ್ದವನನ್ನು ಗಂಗಾದೇವಿ ಕ್ಷಮಿಸಿ ಮೇಲಕ್ಕೆತ್ತುವುದಾದರೂ ಮೂರೇಸಲ; ನಾಲ್ಕನೆಯಸಲಕ್ಕೆ ಅವನನ್ನು ನುಂಗಿಹಾಕುತ್ತಾಳೆ. ಅಂತಹುದರಲ್ಲಿ ಮಾನವಶರೀರಿಗಳು ಎಷ್ಟು ಅನ್ಯಾಯಗಳನ್ನು ತಾನೇ ಸಹಿಸುವುದು ಸಾಧ್ಯ? ನಿಮ್ಮ ಮಾತೆಲ್ಲಾ ಪೌರುಷ ಬಂಜೆಯಾಗಿರುವವರ ಮಾತು. ಈ ನುಡಿಗಳನ್ನಾಡಿ ನಿಮ್ಮ ಹೊಣೆಯಿಂದ ಜಾರಿಕೊಳ್ಳುತ್ತಿರುವ

ನಿಮ್ಮ ಸ್ವರೂಪಕ್ಕೆ ಏನು ಹೇಳಬೇಕೋ ನಾನರಿಯೆ" ಎಂದಳು. ಸಿಡಿಮಿದ್ದಿನಂತಿದ್ದ ಆಕೆಯ ಮಾತುಗಳನ್ನು ಕೇಳಿ ಧರ್ಮರಾಯನೂ ಕೆರಳಿದನು. "ಅಬ್ಬಾ! ಈ ಹೆಂಗಸು ಎಂತಹ ಗಟ್ಟಿಗಳು! ಮಹಾರಾಜರ ಇದಿರಿನಲ್ಲಿ ಇಷ್ಟು ಬಾಯ್ಬಡಿಕತನವೆ? ಗರತಿಯಾದವಳಿಗೆ ಇದು ಗೌರವವೆ ? ಎಂದು ಆತನು ಛೀಗುಟ್ಟಿದನು ಈ ಹಿರಿಯರೆನಿಸಿಕೊಂಡವರಲ್ಲಿ ಗೋಳುಹೇಳಿಕೊಂಡು ಏನೂ ಹುರುಳಿಲ್ಲವೆಂದುಕೊಂಡಳು, ದ್ರೌಪದಿ. ವಾಯುಪುತ್ರನನ್ನು ಶರಣು ಹೋಗಬೇಕೆಂದು ನಿಶ್ಚಯಿಸಿ, ಆಕೆ ಅಲ್ಲಿಂದ ಹೊರಟುಹೋದಳು.

ರಾಜನ ಸಭೆಯಿಂದ ಹೊರಟ ದ್ರೌಪದಿ ನೇರವಾಗಿ ಸುದೇಷ್ಣೆಯ ಬಳಿಗೆ ಹೋದಳು. ಆಕೆ ಏನೂ ಅರಿಯದವಳಂತೆ "ಇದೇಕಮ್ಮ ಮುಖ ಬಾಡಿವೆ" ಎಂದು ಬೊಂಕಿದಳು. ಅದನ್ನು ಕಂಡು ಕೆರಳಿದ ದ್ರೌಪದಿ "ಇದೆಂತಹ ಅರಸುತನದ ಅಟ್ಟಹಾಸವಮ್ಮ ನಿಮ್ಮದು ? ನೀವು ಮಾಡಿದುದು ನಿಮಗೆ ಜ್ಞಾಪಕ ಇಲ್ಲವೆ ?" ಎಂದು ಗದರಿಸಿದಳು. ಅವಳ ಗಡಸು ಧ್ವನಿಯನ್ನು ಕೇಳಿ ಹೆದರಿದ ಸುದೇಷ್ಣೆ "ಅಮ್ಮ ತಪ್ಪಿತಸ್ಥನು ತಮ್ಮನಾದರೂ ಪರಸ್ತ್ರೀಕಾಮುಕನಾದ ಪಾಪಿಯಾದ ಮೇಲೆ ಪರಮ ಶತ್ರು ಇದ್ದಂತೆಯೇ ಸರಿ. ಅವನಿಗೆ ಮರಣದಂಡನೆಯನ್ನು ವಿಧಿಸುತ್ತೇನೆ" ಎಂದು ಸಮಾಧಾನಪಡಿಸಲು ಪ್ರಯತ್ನಿಸಿದಳು. ಆದರೂ ದ್ರೌಪದಿ ಕಟುವಾಗಿಯೇ ಉತ್ತರವಿತ್ತಳು. "ಕೊಲ್ಲಿಸುವ ಕಷ್ಟ ನಿನಗೇಕೆ ತಾಯಿ? ನನ್ನ ಪತಿಗಳಿದ್ದಾರೆ; ಅವರು ಕೀಚಕರ ವಂಶವನ್ನು ಸವರಿಹಾಕಲು ಸಮರ್ಥರಾಗಿದ್ದಾರೆ. ಇದನ್ನು ಮೊದಲೇ ನಿಮಗೆ ಸಾರಿಹೇಳಿದ್ದೇನೆ." ಹೀಗೆ ಹೇಳಿ ಆಕೆ ಪ್ರತ್ಯುತ್ತರವನ್ನೂ ಕೂಡ ನಿರೀಕ್ಷಿಸದೆ ತನ್ನ ಮನೆಗೆ ಹೊರಟುಹೋದಳು.

ಮನೆಗೆ ಹಿಂದಿರುಗಿದ ದ್ರೌಪದಿ ತನ್ನ ದುಸ್ಥಿಯನ್ನು ನೆನೆದು ಒಳಗೊಳಗೇ ಕುದಿದಳು. "ಆತ್ಮಹತ್ಯ ಮಹಾಪಾತಕ; ಬಾಳಿಬದುಕುವುದೆಂದರೆ ನಾಯಕನರಕ. ಆ ಹಿರಿಯಗಂಡ ನಿಗೆ ಧರ್ಮದ ಗ್ರಹ ಬಡಿದಿದೆ. ಅರ್ಜುನನಿಗೆ ಅಣ್ಣನಾಜ್ಞೆಯ ಭ್ರಮೆ. ನಕುಲ ಸಹದೇವರು ಕೇವಲ ಅಸಮರ್ಥರು. ಏನಿದ್ದರೂ ಭೀಮಸೇನನೇ ಶರಣ್ಯ. ಗಂಡಂದಿರಲ್ಲೆಲ್ಲಾ ಮರುಕ ವುಳ್ಳವನೆಂದರ ಆತನೊಬ್ಬನೇ. ಈ ಪಾಪಿ ಕೀಚಕನ ಉಪಟಳವನ್ನು ಆದ್ಯಂತವಾಗಿ ವಿವರಿಸಿದರೆ ಆತನು ಕೆರಳಿದರೂ ಕೆರಳಬಹುದು. ಅಲ್ಲಿಯೂ ಹುರುಳುಗಾಣದಿದ್ದರೆ ಘೋರ ವಿಷವೇ ನನಗೆ ದಿಕ್ಕು." ಹೀಗೆಂದುಕೊಂಡ ದ್ರೌಪದಿ, ಆ ದಿನ ಇರುಳಿನಲ್ಲಿ ಭೀಮನನ್ನು ಅರಸುತ್ತಾ ಅರಮನೆಯ ಪಾಕ ಶಾಲೆಗೆ ಹೋದಳು. ತನ್ನ ದುರವಸ್ಥೆಯಲ್ಲಿಯೂ ಆಕೆಗೆ ನಗು ಬಂದಿತು, ಅಲ್ಲಿ ಮಲಗಿದ್ದ ಭೀಮನನ್ನು ಕಂಡು. ಅವನು ಪಾಕವಿದ್ಯೆಯನ್ನು ಯಾರಲ್ಲಿ ಕಲಿತನೋ! ಭೀಮನಂತಹ ವ್ಯಕ್ತಿ ಅಡಿಗೆಯ ಬಂಟನಾಗುವುದೆಂದರೆ ವಿಧಿ ಎಂತಹ ಕಠೋರವಾದುದೋ!

ದ್ರೌಪದಿ ಮಲಗಿದ್ದವನ ಮುಸುಕನ್ನು ಮೆಲ್ಲಮೆಲ್ಲನೆ ಸ್ವಲ್ಪ ಸಡಲಿಸಿ, ಅವನ ಗಲ್ಲವನ್ನು ಹಿಡಿದು ಅಲ್ಲಾಡಿಸಿದಳು. ಪುಣ್ಯಕ್ಕೆ ಭೀಮನು ತಕ್ಷಣವೇ ಎಚ್ಚತ್ತ. ಇದಿರಿಗೆ ಮ್ಲಾನ ವದನಳಾಗಿ ನಿಂತಿದ್ದ ತನ್ನ ಮನೋವಲ್ಲಭೆಯನ್ನು ಕಂಡು ಆತನು "ಏಕೆಬಂದೆ ಲತಾಂಗಿ ?" ಎಂದು ಕೇಳಿದ. ದ್ರೌಪದಿ ತುಂಬಿದ ಸಭೆಯಲ್ಲಿ ಕೀಚಕನಿಂದ ತನಗಾದ ಅಪಮಾನವನ್ನು ಗಂಡನಿಗೆ ಜ್ಞಾಪಿಸುತ್ತಾ "ನಿನ್ನಂತಹ ಗಂಡನಿದ್ದೂ ನನಗೆ ಇಂತಹ ಪರಿಭವವೇ ? ಆ ಕೀಚಕ ಬೇರೆ ನನ್ನ ಬೆನ್ನುಬಿಡು

ವಂತಿಲ್ಲ. ನನಗೆ ಜೀವನದಲ್ಲಿ ಜಿಗುಪ್ಸೆ ಹುಟ್ಟಿಹೋಗಿದೆ. ನಾನಂತೂ ಖಂಡಿತ ಬದುಕುವುದಿಲ್ಲ. ಇದರಿಂದ ಬರಬಹು ದಾದ ಪಾಪಕ್ಕೆ ನೀನೇ ಹೊಣೆ" ಎಂದಳು. ಅವಳ ಮಾತು ಕೇಳಿ ಭೀಮನಿಗೆ ರೇಗಿಹೋಯಿತು. "ದ್ರೌಪದಿ, ನಿನಗೆ ನಾನೊಬ್ಬನೇ ಅಲ್ಲ ಗಂಡ; ಇನ್ನೂ ನಾಲ್ವರಿದ್ದಾರೆ. ಅವರಲ್ಲಿ ಹೋಗಿ ಅಳು. ಆ ಮಹರಾಯ ಧರ್ಮರಾಯ ನನಗೆ ಸ್ವಲ್ಪವೂ ಅವಕಾಶ ಕೊಡುವಂತಿಲ್ಲ; ನಾನೇನು ಮಾಡಲಿ? ಅಂದು ದುಶ್ಶಾಸನನ ಕರುಳು ಬಗೆದುಹಾಕುವುದಕ್ಕೆ ಹೊರಟಾಗ ಹಲ್ಲು ಹಲ್ಲು ಗಿರಿದು ಅದನ್ನು ನಿಲ್ಲಿಸಿದ. ಇಂದು ಕೀಚಕ ನಾಯನ್ನು ಒರಸಿಹಾಕೋಣವೆಂದು ಮರದಕಡೆ ನೋಡಿದರೆ ಬೇಡವೆಂದು ನಿವಾರಿಸಿದ. ನೀನೇ ಇದನ್ನು ಪ್ರತ್ಯಕ್ಷವಾಗಿ ಕಂಡಿದ್ದೀಯೆ. ಹೆಣ್ಣಿಗಾಗಿ ಅಣ್ಣನ ಮಾತನ್ನು ಮೀರಿದನೆಂದು ಲೋಕ ನನ್ನನ್ನು ನಿಂದಿಸಬೇಕೇನು? ನನ್ನಿಂದ ಇದು ಸಾಧ್ಯ ವಿಲ್ಲ. ಹೋಗಿ ಆತನನ್ನೇ ಬೇಡಿಕೊ. ನಾನು ಆತನ ಆಜ್ಞೆ ಯೆಂಬ ಕಣ್ಣಿಗೆ ಸಿಕ್ಕಿಬಿದ್ದುಹೋಗಿದ್ದೇನೆ. ಇನ್ನುಮೇಲೆ ನಿನಗೆ ನಾಲ್ಕೇ ಗಂಡರೆಂದು ತಿಳಿದುಕೋ. ನನ್ನ ಪ್ರಸ್ತಾಪ ವನ್ನೇ ಮರೆತುಬಿಡು" ಎಂದು ಆತ ಅಕ್ಕಸದಿಂದ ಮಾತ ನಾಡಿದ.

ಭೀಮಸೇನನ ಮಾತಗಳನ್ನು ಕೇಳುತ್ತಿದ್ದಂತೆಯೇ ದ್ರೌಪದಿಗೆ ದುಃಖ ಒತ್ತರಿಸಿಬಂತು. ಬೆಂಕಿ ತಗುಲಿದ ಬಾಳೆಯ ಸುಳಿಯಂತೆ ಮುಮ್ಮಲ ಮರುಗಿ, ಕಣ್ಣೀರಿನಲ್ಲಿ ತೊಯ್ದು ಹೋದಳು. ಹುಟ್ಟಿದುದು ಪಾಂಚಾಲನರಾಜನ ಮಗಳಾಗಿ. ಕೈಹಿಡಿದುದು ದೇವತೆಗಳನ್ನೂ ಅಲ್ಲಗಳೆಯಬಲ್ಲ ಪಾಂಡುಪುತ್ರ ರನ್ನು. ತನ್ನ ಪಾಲಿಗೆಬಂದುದು ಮಾತ್ರ ವಿರಾಟನ ಮನೆಯ

ಹೆಂಗಸರಿಗೆ ತುರುಬುಕಟ್ಟುವ ಸೇವಾವೃತ್ತಿ. ಐದು ಜನ ಒಟ್ಟಾ
ಗಿ ಸೇರಿ ಒಬ್ಬಳನ್ನು ಆಳಲಾರದೆ ಅಳುತ್ತಿದ್ದಾರೆ ರಾಜ್ಯ, ಐಶ್ವರ್ಯ
ಗಳನ್ನೆಲ್ಲಾ ಕೌರವನಿಗೆ ವಹಿಸಿಕೊಟ್ಟರು. ಇನ್ನು ಕೈಹಿಡಿದ
ತನ್ನನ್ನು ಕೀಚಕನಿಗೆ ವಹಿಸಿಕೊಡುತ್ತಿದ್ದಾರೆ. ತಾವು ಅಜ್ಞಾತವಾ
ಸದಲ್ಲಿ ತಲೆಮರೆಸಿಕೊಂಡು ಕುಳಿತಿದ್ದಾರಲ್ಲ! ದ್ರೌಪದಿ ಭೀಮ
ನಲ್ಲಿ ಪರಿಪರಿಯಾಗಿ ಹಲುಬಿ ಕಟ್ಟಕಡೆಗೆ "ಬಲ ಭೀಮನೆ,
ನನಗೆ ಸಾಯಲು ಅಪ್ಪಣೆಯನ್ನು ಕೊಟ್ಟೆಯಷ್ಟೆ, ಆಯಿತು.
ಅಣ್ಣನ ಅಪ್ಪಣೆಗೆ ಅಪೋಹ ತರಬೇಡ. ನಾನು ಬಂದು ಕಟು
ವಾಗಿ ನುಡಿದುದನ್ನು ಕ್ಷಮಿಸು. ಮುಂದೆ ಎಂದಾದರೂ ವಿನೋ
ದದಲ್ಲಿರುವಾಗ ನಾನು ಒಬ್ಬಳಿದ್ದೆನೆಂಬುದನ್ನು ನೆನಸಿಕೋ"
ಎಂದು ಹೇಳಿ ಕಾಲಿಗೆರಗಿದಳು.

ಹೀಗೆ ಸಾವಿಗೆ ಸಿದ್ಧಳಾಗಿ ನಿಂತ ಮಡದಿಯ ದೀನಾವಸ್ಥೆ
ಯನ್ನು ಕಂಡು ಭೀಮನಿಗೂ ಕಣ್ಣಲ್ಲಿ ನೀರು ತುಂಬಿತು. ಅವಳ
ಮೇಲಿನ ಕರುಣೆಯೇ ಶತ್ರುಗಳ ಮೇಲಿನ ಸಿಟ್ಟಾಗಿ ಪರಿವರ್ತನೆ
ಗೊಂಡಿತು. ಮಡದಿಯನ್ನು ಮೃದುವಾಗಿ ಹತ್ತಿರಕ್ಕೆ ಎಳೆದು
ಕೊಂಡು, ತನ್ನ ವಸ್ತ್ರದಕೊನೆಯಿಂದ ಅವಳ ಕಣ್ಣೀರನ್ನು ಒರಸಿ,
ತುರುಬನ್ನು ಹಿಂದಕ್ಕೆ ಚಾಚುತ್ತ, ಗಲ್ಲವನ್ನು ಸವರಿದನು. ಆ
ಸುಂದರ ಮೂರ್ತಿಯನ್ನು ಕಾಣಕಾಣುತ್ತಾ ಅವನು ಕ್ರೋಧ
ದಿಂದ ಮೈಮರೆತು "ಎಲೈ ಸುಂದರಿ, ಇನ್ನು ನಿನ್ನ ಭಯವನ್ನು
ದೂರವಿಡು. ಇಗೋ ಅಣ್ಣಹಾಕಿದ ಗೆರೆಯನ್ನು ದಾಟಿಬಿಟ್ಟಿ
ದ್ದೇನೆ. ಇನ್ನು ಕೀಚಕನ ಹುಟ್ಟಡಗಿಸುತ್ತೇನೆ. ವಿರಾಟನೇನಾ
ದರೂ ಅಡ್ಡಬಂದನೋ ಅವನ ವಂಶವನ್ನೇ ಅಳಿಸಿಬಿಡುತ್ತೇನೆ.
ಇದರಿಂದ ನಮ್ಮ ಗುರುತು ಕೌರವಗೆ ತಿಳಿಯುವಂತಾದರೆ
ಅವರನ್ನೆಲ್ಲಾ ಚೂರುಚೂರಾಗಿ ಕತ್ತರಿಸಿಹಾಕಿಬಿಡುತ್ತೇನೆ.

ಇದು ಅಕಾರ್ಯವೆಂದು ದೇವತೆಗಳು ಹೇಳುವುದಾದರೆ ಅವರ ಮುಸುಡನ್ನೆಲ್ಲಾ ಮಹೇಂದ್ರಪರ್ವತದಲ್ಲಿ ತೇದುಬಿಡುತ್ತೇನೆ. ಇನ್ನು ನನ್ನ ಅಣ್ಣತಮ್ಮಂದಿರಾರನ್ನೂ ನಾನು ಲಕ್ಷಿಸುವುದಿಲ್ಲ. ನನ್ನ ಕಾರ್ಯಕ್ಕೆ ಅಡ್ಡಿಮಾಡುವುದಾದರೆ ಅವರು ನನ್ನ ಸೋದರರೇ ಅಲ್ಲ. ಸ್ವತಃ ಶ್ರೀಕೃಷ್ಣನೇ ಅಡ್ಡಬಂದರೂ ನಾನು ಲಕ್ಷಿಸುವುದಿಲ್ಲ. ಸಿಂಹದ ಕೂಸನ್ನು ನರಿ ಕೆಣಕಿದಂತೆ ಈ ನೀಚ ಕೀಚಕನು ನಿನ್ನನ್ನು ಕೆಣಕಿದ್ದಾನೆ. ಅವನ ಆಯುರ್ದಾಯ ಮುಗಿಯಿತೆಂದು ತಿಳಿ. ನನ್ನನ್ನು ಕೆರಳಿಸಿಬಿಟ್ಟದ್ದೀಯೆ, ಇನ್ನು ನಿನ್ನ ಕ್ಷೇಮ ಸಮಾಚಾರ ನನ್ನದು. ನಾಟ್ಯಮಂಟಪವನ್ನು ಸಂಕೇತಸ್ಥಾನವಾಗಿ ಸೂಚಿಸಿ ಆ ನಾಯಿಯನ್ನು ಅಲ್ಲಿಗೆ ಬರಿಸು. ನಾನು ಅಲ್ಲಿಯೇ ಮರೆಯಾಗಿದ್ದು ಅವನ ಬಸುರನ್ನು ಬಗೆದು ಶಾಕಿನಿಯರಿಗೆ ತೃಪ್ತಿಪಡಿಸುತ್ತೇನೆ'' ಎಂದನು. ಗಂಡನ ಮಾತು ಕೇಳಿ ದ್ರೌಪದಿಗೆ ಹೊಟ್ಟೆ ಹಿಡಿಸಲಾರದಷ್ಟು ಸಂತೋಷವಾಯಿತು. 'ನನ್ನ ಪರಮ ಸುಕೃತದಿಂದ ನೀನು ನನಗೆ ಪತಿಯಾಗಿ ದೊರೆತೆ' ಎಂದು ಆತನನ್ನು ಹೊಗಳಿ, ಆಕೆ ಮನೆಗೆ ಹಿಂದಿರುಗಿದಳು. ಆ ವೇಳೆಗೆ ಇರುಳು ಕಳೆದು ಬೆಳ್ಳಗೆ ಬೆಳಗಾಯಿತು.

ನಿತ್ಯದಂತೆ ಆ ದಿನವೂ ಕೀಚಕನು ಅರಮನೆಗೆ ಹೊರಟವನು ದಾರಿಯಲ್ಲಿ ವೃಕೋದರವಲ್ಲಭೆಯನ್ನು ಕಂಡನು. ಹಿಂದಿನ ದಿನದ ಅನುಭವ ಅವನನ್ನು ಕೈ ಮುಂದುಮಾಡದಂತೆ ಹೆದರಿಸಿತ್ತು. ಆದ್ದರಿಂದ ದೂರದಿಂದಲೇ ಅವಳನ್ನು ಕುರಿತು ''ಸುಂದರಿ, ಹಿಂದಿನ ರಾತ್ರಿಯೆಲ್ಲಾ ಒಂದು ಯುಗದಂತೆ ಕಾಲ ಕಳೆದುದಾಯಿತು. ಮನ್ಮಥ ನನ್ನ ಪಾಲಿನ ಯಮನಾಗಿಬಿಟ್ಟಿದ್ದಾನೆ. ದಯಾಶಾಲಿನಿಯಾದ ನೀನು ಕೃಪೆ ತೋರಬಾರದೆ?" ಎಂದನು. ಅದಕ್ಕೆ ಉತ್ತರವಾಗಿ ದ್ರೌಪದಿ "ಅದು ಹಾಗೆಯೇ ಸರಿ. ಪರ

ಸತಿಗೆ ಆಳುಪಿದಲ್ಲಿ ಮನ್ಮಥ ಯಮನಾಗುತ್ತಾನೆ; ಅಮೃತ ವಿಷವಾಗುತ್ತದೆ; ಆಲಿಕಲ್ಲು ಬಿಸಿಯಾಗುತ್ತದೆ. ಪಾಪಿಯಾದ ಅವನನ್ನು ಹೊರಲು ಭೂಮಾತೆ ಕೂಡ ಹೇಸುತ್ತಾಳೆ. ಆದರೇನು? ನಿನಗೆ ಎಷ್ಟು ಹೇಳಿದರೂ ವಿವೇಕವುದಿಸುವಂತಿಲ್ಲ. ನಿನಗೆ ಕಡೆಗಾಲ ಬಂದಿದೆಯೆಂದೇ ತೋರುತ್ತದೆ. ನನ್ನವರಿಗೇನಾದರೂ ಗೊತ್ತಾದರೆ ನಿನ್ನ ವಂಶವನ್ನೇ ಸವರಿಹಾಕಿಬಿಡುವರು. ಯಾರಿಗೂ ಗೊತ್ತಾಗದಂತೆ ಇಂದು ಸಂಜೆ ನಾಟ್ಯಶಾಲೆಗೆ ಬಾ. ನಾನು ಕತ್ತಲೆಯಲ್ಲಿ ಮೈಮರೆಸಿಕೊಂಡು ಬರುತ್ತೇನೆ. ಇದರ ಮೇಲೆ ದೇವರು ಮಾಡಿದಂತಾಗಲಿ" ಎಂದಳು. ಕಡೆಯ ಆ ಎರಡು ನುಡಿಗಳನ್ನು ಕೇಳಿ ಕೀಚಕನ ಸಂತೋಷಕ್ಕೆ ಪಾರವಿಲ್ಲದಂತಾಯಿತು. ತಾನು ಧನ್ಯನಾದೆನೆಂದುಕೊಂಡನು.

ಹಗಲು ಕಳೆಯಿತು. ರಾತ್ರಿ ಕತ್ತಲೆ ಸುತ್ತಲೂ ಹಬ್ಬಿ ಹರಡಿತ್ತು. ದ್ರೌಪದಿ ತನ್ನ ಕಣ್ಣುಗಳನ್ನೇ ಕೈದೀವಿಗೆಯಾಗಿ ಮಾಡಿಕೊಂಡು ಬಾಣಸಿನ ಮನೆಗೆ ಬಂದಳು. ಅಲ್ಲಿ ಕೀಚಕಸಂಹಾರಕ್ಕಾಗಿ ಸಿದ್ಧನಾಗಿ ಕುಳಿತಿದ್ದ ಭೀಮನನ್ನು ದ್ರೌಪದಿಯು ಸ್ತ್ರೀವೇಷದಿಂದ ಅಲಂಕರಿಸಿ "ಆ ಪಾಪಿಯ ಹುಟ್ಟಡಗಿಸು" ಎಂದು ಹೇಳಿ, ಹಣೆಗೆ ತಿಲಕವನ್ನಿಟ್ಟಳು: 'ಅರಿವಿಜಯಿಯಾಗು' ಎಂದು ಸೇಸೆಯನ್ನು ತಳಿದಳು. ಅವಳ ಆದರದ ನುಡಿಗಳಿಗೆ ಹಿಗ್ಗುತ್ತಾ ಭೀಮಸೇನನು ಕತ್ತಲೆಯಲ್ಲಿ ಯಾರಿಗೂ ಕಾಣದಂತೆ ನಡೆತಂದು ನಾಟ್ಯಗೃಹದ ಮಣಿಮಂಚದಮೇಲೆ ಮುಸುಕು ಹಾಕಿಕೊಂಡು ಮಲಗಿದನು.

ಅತ್ತ ಕೀಚಕನು ಸಂಜೆಯಾಗುತ್ತಲೇ ಅತ್ಯಂತ ಸಂಭ್ರಮದಿಂದ ದಿವ್ಯಾಲಂಕಾರಗಳನ್ನು ಧರಿಸಿದನು. ದಿವ್ಯಗಂಧವನ್ನು ಲೇಪಿಸಿಕೊಂಡು ಮಲ್ಲಿಗೆಯ ಮೊಗ್ಗಿನಿಂದ ತನ್ನ ತಲೆಗೂದಲ

ಗಂಟನ್ನು ಅಲಂಕರಿಸಿಕೊಂಡನು. ಅನಂತರ ಕೇವಲ ವಯ್ಯಾರ ದಿಂದ ಕೈಲಿದ್ದ ಸುರಗಿಯನ್ನು ತಿರುಗಿಸುತ್ತಾ ನಾಟ್ಯಗೃಹವನ್ನು ಸೇರಿ, ಕತ್ತಲಲ್ಲಿ ತಡವರಿಸುತ್ತಾ ಮಂಚದ ಬಳಿಗೆ ಹೋದನು. ಅಲ್ಲಿ ಮಲಗಿದ್ದ ವ್ಯಕ್ತಿ ಸೈರಂಧ್ರಿಯೆಂದೇ ಭ್ರಮಿಸಿದ್ದ ಆ ಕಾಮಿಯು "ಎಲೈ ಸೈರಂಧ್ರಿ, ಇಗೋ ಈ ಪುಷ್ಪ ತಾಂಬೂಲಾದಿಗಳನ್ನು ತೆಗೆದುಕೋ. ನೋಡು, ನಿನಗೆ ಅನುರೂಪನಾದವನೆಂದರೆ ನಾನೇ ಸರಿ. ದೇವತೆಗಳಲ್ಲಿ ತಾನೆ ನನ್ನಂಥ ಚಲುವರಾರಿದ್ದಾರೆ?" ಎಂದನು. ಭೀಮನು ಅವನ ಮಾತಿನ ಧಾಟಿಯಲ್ಲಿಯೇ "ಆಹಾ, ಈ ಜಗತ್ತಿನಲ್ಲಿ ನನಗೆ ಸೋಲದ ಪುರುಷರೇ ಇಲ್ಲ ನನಗೆ ಸಮಾನನೆಂದರೆ ನೀನೇ ಸರಿ. ಆದ್ದರಿಂದಲೇ ನಿನ್ನನ್ನು ಒಲಿದು ಬಂದಿದ್ದೇನೆ. ನನ್ನ ಹೆಣ್ಣುತನವನ್ನು ಯಥೇಚ್ಛವಾಗಿ ಅನುಭವಿಸುವವನಾಗು" ಎಂದನು. ಈ ಮಾತಿನಿಂದ ಕೀಚಕನಿಗೆ ಸ್ವರ್ಗ ಮೂರೇ ಬೆರಳು ಉಳಿದಂತಾಯಿತು. ಮಲಗಿದ್ದ ಭೀಮನ ಮೈಯ್ಯನ್ನು ಕೇವಲ ಲಂಪಟತನದಿಂದ ಸವರಿದನು. "ಇದೇನು? ಸೈರಂಧ್ರಿಯ ಮೈ ಇಷ್ಟು ಕಠಿನವಾಗಿದೆ" ಎಂದುಕೊಂಡು, "ಎಲೈ ಸೈರಂಧ್ರಿ, ನೀನೇನು ಮಾಯಾ ವೇಷವನ್ನು ಧರಿಸಿರುವೆಯಾ! ನಿನ್ನ ದೇಹ ಎಷ್ಟು ಕರ್ಕಶವಾಗಿದೆಯಲ್ಲಾ!" ಎಂದನು. ಅವನ ಬಾಯಿಂದ ಈ ಮಾತು ಹೊರಡುತ್ತಿದ್ದಂತೆಯೇ ಮಾರುತಿ ಮೇಲಕ್ಕೆದ್ದು "ಪರಸತಿಗೆ ಕಣ್ಣು ಹಾಕಿದವರಿಗೆಲ್ಲಾ ಹಾಗೆಯೆ ಆಗುವುದು; ಅಮೃತ ವಿಷವಾಗುತ್ತದೆ. ಕೋಮಲವಾದುದು ಕಠಿಣವಾಗುತ್ತದೆ" ಎಂದು ಹೇಳಿ ಮುಂದಲೆಯನ್ನು ಹಿಡಿದು ಜಗ್ಗಿದನು. "ಛೀ ಚಪಲ ಹೆಣ್ಣೆ, ಹೋಗಾಚೆ" ಎಂದು ಅವನು ನಿವಾರಿಸುತ್ತಿದ್ದಂತೆಯೇ ಭೀಮನು ಅವನ ಜುಟ್ಟನ್ನು ಹಿಡಿದು ಕೆಳಕ್ಕೆ ಜಗ್ಗಿ

ದನು. ಇಷ್ಟಾಗುವುದರಲ್ಲಿ ಕೀಚಕನಿಗೆ ಅಲ್ಲಿರುವವಳು ಹೆಣ್ಣಲ್ಲ ವೆಂದು ಅರ್ಥವಾಗಿ ಹೋಯಿತು. ಈ ಕುಚೋದ್ಯಕ್ಕೆ ತೊಡ ಗಿದ ನೀಚನ ಕರುಳನ್ನು ಬಗೆದು ಹಾಕಬೇಕೆಂದು ಆತನ ಮೇಲೆ ಬಿದ್ದನು. ಇಬ್ಬರೂ ಮಲ್ಲ ಕಾಳಗದಲ್ಲಿ ನಿಪುಣರು. ಆದರೂ ಭೀಮನ ಹೊಡೆತಗಳಿಗೆ ಕೀಚಕನು ತತ್ತರಿಸಿಹೋ ದನು. ಭೀಮನು ಒಮ್ಮೆ ತಿವಿದೊಡನೆಯೇ ಇವನ ಎದೆ ಜರ್ಝರಿತವಾಯಿತು; ಕರುಳುಗಳನ್ನು ಕಾರಿಕೊಂಡು ಕೆಳಕ್ಕೆ ಬಿದ್ದನು. ಕ್ಷಣ ಮಾತ್ರದಲ್ಲಿ ಆತನ ಪ್ರಾಣವಾಯು ಹಾರಿ ಹೋಯಿತು. ಭೀಮಸೇನನು ಸತ್ತವನ ತಲೆಯನ್ನು ಎದೆ ಯೊಳಕ್ಕೆ ಒತ್ತಿ, ಕಾಲುಗಳನ್ನು ಹೊಟ್ಟೆಯೊಳಕ್ಕೆ ತುರುಕಿ ಅಲ್ಲಿಂದ ಹೊರಕ್ಕೆ ಬಂದನು. ಸಮೀಪದಲ್ಲಿಯೇ ನಿಂತಿದ್ದ ದ್ರೌಪದಿಗೆ ಯಮುನ ಕೋಣ ತುಳಿದಂತೆ ಜಜ್ಜಿ ಬಿದ್ದಿದ್ದ ಆ ಕಾಮುಕನ ಹೆಣವನ್ನು ತೋರಿಸಿ, ಅವಳಿಂದ ಮುಗುಳ್ನಗೆಯ ನ್ನು ಪಡೆದು, ಆವನು ತನ್ನ ನಿಳಯಕ್ಕೆ ಹೊರಟು ಹೋದನು.

ಭೀಮನು ಅತ್ತಹೋಗುತ್ತಲೂ ಇತ್ತ ದ್ರೌಪದಿ ಕಾವಲಿನ ವರನ್ನು ಕೂಗಿ ಕರೆದು "ನೋಡಿ, ನಾನು ಬೇಡವೆಂದರೆ ಈ ಕೀಚಕನು ನನ್ನನ್ನು ಬಲಾತ್ಕರಿಸಿದನು. ನನ್ನ ಪತಿಗಳು ಆವ ನನ್ನು ಬಲಿಹಾಕಿದ್ದಾರೆ" ಎಂದು ಹೇಳಿದಳು ಅವರು ಕೈ ದೀವಟಿಗೆಗಳ ಬೆಳಕಿನಲ್ಲಿ ಕೀಚಕನ ಭಯಂಕರ ಮರಣವನ್ನು ಕಂಡು ಓಡಿಹೋಗಿ ಅವನ ತಮ್ಮಂದಿರಾದ ಉಪಕೀಚಕರಿಗೆ ತಿಳಿಸಿದರು. ಅಣ್ಣನ ಮರಣವಾರ್ತೆಯಿಂದ ಅತ್ಯಂತ ವ್ಯಥೆ ಗೊಂಡ ಆ ಸೋದರರು ಹೆಣದ ಬಳಿಗೆ ಬಂದು "ಅಯ್ಯೋ, ಈ ಮಾರಿಗೋಸ್ಕರ ನಮ್ಮ ಅಣ್ಣನು ಮಡಿದನೇ" ಎಂದು ಗೋಳಾಡಿದರು. ಆ ನಡು ರಾತ್ರಿಯಲ್ಲಿಯೇ ಅವರು ವಿರಾ

ಟನ ಬಳಿಗೆ ಹೋಗಿ, ತಮ್ಮ ಅಣ್ಣನ ದುರವಸ್ಥೆಯನ್ನು ತಿಳಿಸಿ, ಅವನೊಡನೆ ಸೈರಂಧ್ರಿಯನ್ನೂ ಸುಟ್ಟುಹಾಕಲು ರಾಜಾಜ್ಞೆಯನ್ನು ಪಡೆದರು. ಅನಂತರ ಹೆಣವನ್ನು ಮಂಚಕ್ಕೆ ಕಟ್ಟಿ, ಅದರ ಕಾಲ್ದೆಸೆಯಲ್ಲಿ ದ್ರೌಪದಿಯನ್ನು ಮಂಚದ ಕಾಲುಗಳಿಗೆ ಬಿಗಿದರು. ಶ್ಮಶಾನಯಾತ್ರೆಗೆ ಸಿದ್ಧವಾಯಿತು. ಆಗ ದ್ರೌಪದಿ ತನಗೊದಗಿರುವ ವಿಪತ್ತನ್ನು ಹೇಳಿಕೊಂಡು ಗಟ್ಟಿಯಾಗಿ ಒರಲಿದಳು.—" ಅಯ್ಯೋ ಪಾಪಿ ಗಂಧರ್ವರಿರಾ ! ನನ್ನನ್ನು ಜೀವ ಸಹಿತ ಬೆಂಕಿಯಲ್ಲಿ ಹಾಕುತ್ತಾರೆ " ಎಂದು.

ಆಗತಾನೆ ಕೀಚಕನನ್ನು ವಧಿಸಿ ಹಿಂದಿರುಗಿದ್ದ ಭೀಮಸೇನನಿಗೆ ದ್ರೌಪದಿಯ ಆಕ್ರಂದನ ಕೇಳಿಸಿತು. ಆತನು ಕಿಡಿಕಿಡಿಯಾಗುತ್ತಾ ಶ್ಮಶಾನಕ್ಕೆ ಧಾವಿಸಿದನು. ಅಲ್ಲಿ ಒಂದು ದೊಡ್ಡ ಮರ. ಅದನ್ನು ಬುಡ ಸಹಿತ ಕಿತ್ತು ನೂರೈವರು ಉಪಕೀಚಕರನ್ನೂ ಒಂದೇ ಬಾರಿಗೆ ಹೊಡೆದು ಕೊಂದು ಹಾಕಿದನು. ಅನಂತರ ದ್ರೌಪದಿಯ ಬಂಧವಿಮೋಚನೆ ಮಾಡಿ ಮನೆಗೆ ಹಿಂದಿರುಗಿದವನೇ ಬೆಣ್ಣೆತಿಂದ ಬೆಕ್ಕಿನಂತೆ ಸ್ವಸ್ಥಚಿತ್ತನಾಗಿ ಹಾಸಿಗೆಯಲ್ಲಿ ಮಲಗಿದನು.

ಬಂಧವಿಮುಕ್ತಳಾದ ದ್ರೌಪದಿ ಸಮೀಪದಲ್ಲಿದ್ದ ಕೊಳದಲ್ಲಿ ಸ್ನಾನ ಮಾಡಿ ಮತ್ತೆ ಊರನ್ನು ಪ್ರವೇಶಿಸಿದಳು. ಈ ವೇಳೆಗೆ ಆಗಲೆ ಬೆಳಕು ಹರಿದಿತ್ತು. ಅದರೊಡನೆ ಕೀಚಕ ಉಪಕೀಚಕರ ಮರಣವೃತ್ತಾಂತವೂ ಕಾಳ್ಗಿಚ್ಚಿನಂತೆ ಊರಲ್ಲೆಲ್ಲಾ ಹಬ್ಬಿತ್ತು. ಬೀದಿಯಲ್ಲಿ ಬರುತ್ತಿದ್ದ ದ್ರೌಪದಿಯನ್ನು ಕಾಣುತ್ತಲೇ ಜನ ಬಾಗಿ ಬಾಗಿ ಅವಳಿಗೆ ನಮಸ್ಕರಿಸಿದರು. ' ಓಹೋ ಇವಳಿಗಾಗಿಯೇ ಕೀಚಕ ಸತ್ತಿದ್ದು ' ಎಂದು ಕೆಲವು ಜನ: ' ಅಯ್ಯೋ ನಮಗೇಕಪ್ಪ ಆ ಸುದ್ದಿ ' ಎಂದು ಮತ್ತೆ

ಕೆಲವರು; ದ್ರೌಪದಿ ಈ ನುಡಿಗಳನ್ನು ಕೇಳುತ್ತ, ಅಡಿಗೆಯ ಮನೆಯ ಬಾಗಿಲಿನಲ್ಲಿ ನಿಂತಿದ್ದ ಭೀಮನನ್ನು ಕಂಡು ಕಡೆಗಣ್ ನೋಟವನ್ನು ಆಕಡೆ ಬೀರುತ್ತ 'ಗಂಧರ್ವಪತಿಗೆ ನಮಸ್ಕಾರ' ಎಂದು ಹೇಳಿ, ತನ್ನ ಮನೆಯನ್ನು ಸೇರಿದಳು. ಆವೇಳೆಗೆ ಮಹಾರಾಣಿಯಿಂದ ಕರೆಬಂದಿತು. ದ್ರೌಪದಿಯು ಆಕೆಯ ಬಳಿಗೆ ಹೋಗುತ್ತಲೇ ಆಕೆಯು "ಮಹಾತಾಯೆ, ನಿನ್ನನ್ನು ಕಂಡರೆ ನಮಗೆ ಭಯವಾಗುತ್ತದೆ. ನೀನು ನಮ್ಮ ಊರಿನಲ್ಲಿರುವುದೇ ನಮಗೆ ಭಯಂಕರವಾಗಿದೆ. ನಮ್ಮನ್ನು ಜೀವ ಸಹಿತ ಬಿಟ್ಟು ನಿನ್ನ ಮನಸ್ಸುಬಂದ ಕಡೆ ಹೊರಟುಹೋಗು" ಎಂದಳು. ಆಗ ದ್ರೌಪದಿಯು "ಅಮ್ಮಾ, ನಿಮ್ಮ ತಮ್ಮನು ಮಾಡಬಾರದುದನ್ನು ಮಾಡಿ ಹಾಳಾದನು. ಇದರಲ್ಲಿ ನನ್ನ ಅಪರಾಧವೇನಿದೆ? ನಾನೇನೂ ಉಪ್ಪು ತಿಂದ ಮನೆಗೆ ಎರಡು ಬಗೆಯುವವಳಲ್ಲ. ಇಷ್ಟರಮೇಲೆ ಇನ್ನು ಹದಿಮೂರು ದಿನಗಳ ಅವಧಿಯನ್ನು ಕೊಟ್ಟರೆ ಸಾಕು. ಅನಂತರ ನಿಮ್ಮ ಆಪೇಕ್ಷೆಯಂತೆಯೇ ನಡೆದುಕೊಳ್ಳುತ್ತೇನೆ" ಎಂದು ಹೇಳಿ ತನ್ನ ಅರಮನೆಗೆ ಹಿಂತಿರುಗಿದಳು.

ಕೀಚಕನ ಮರಣದ ವೃತ್ತಾಂತ ದೇಶದೇಶಗಳಲ್ಲೆಲ್ಲಾ ಜನಜನಿತವಾಯಿತು. ಅಜ್ಞಾತದಲ್ಲಿದ್ದ ಪಾಂಡವರ ಅನ್ವೇಷಣೆಗೆಂದು ದುರ್ಯೋಧನನು ಅಟ್ಟಿದ್ದ ಗೂಢಚಾರರಿಗೂ ಈ ಸುದ್ದಿ ಗೊತ್ತಾಯಿತು. ದೇಶದೇಶಗಳಲ್ಲೆಲ್ಲಾ ತೊಳಲಿ ಹಸ್ತಿನಾವತಿಗೆ ಹಿಂದಿರುಗಿದ ಅವರು ತಮ್ಮ ಒಡೆಯನಲ್ಲಿ "ಪ್ರಭು, ಈ ಭೂಮಂಡಲದಲ್ಲಿಯಂತೂ ಪಾಂಡವರ ಸುಳಿವಿಲ್ಲ. ನಿನ್ನ ವೈರಿಗಳು ನಿರ್ನಾಮರಾಗಿರುವುದೇ ನಿಶ್ಚಯ. ಆ ವಿಷಯದಲ್ಲಿ ನೀನು ನಿಶ್ಚಿಂತನಾಗಿರಬಹುದು. ಇನ್ನೊಂದು ಸಂತೋಷದ ಸಮಾಚಾರವೆಂದರೆ ಕೀಚಕನೂ ಅವನ ಸೊದರರೂ ನಾಶವಾದುದು. ಕುಪಿ

ತರಾದ ಗಂಧರ್ವರು ಒಂದಿರುಳಿನಲ್ಲಿ ಅವರೆಲ್ಲರನ್ನೂ ಸಂಹರಿಸಿದರು. ಹಿಂದೆ ರಾವಣಗಾದಗತಿ ಇಂದು ಕೀಚಕನಿಗಾಯಿತು." ಎಂದು ಕೀಚಕವಧವೃತ್ತಾಂತವನ್ನು ಜನಜನಿತವಾಗಿದ್ದ ರೀತಿಯಲ್ಲಿ ವಿವರಿಸಿ ನಿವೇದಿಸಿದರು.

ಗೂಢಚಾರರ ಮಾತುಗಳನ್ನು ಕೇಳಿ ಕೌರವ ಬೆರಗಾದ. ಗಂಧರ್ವಪತ್ನಿ ಯೆಂಬುವಳು ದ್ರೌಪದಿಯೇ ಇರಬೇಕು; ಕೀಚಕ ಖಳನನ್ನು ಕೊಂದವನು ಭೀಮನೇ ಇರಬೇಕು-ಎಂದು ಆತನು ತರ್ಕಿಸಿದನು. ಇದನ್ನು ಮಂತ್ರಿಗಳೂ ಒಪ್ಪಿದರು. ಅವರೊಡನೆ ಸಮಾಲೋಚಿಸಿದ ದುರ್ಯೋಧನನು ವಿರಾಟನ ಪಟ್ಟಣಕ್ಕೆ ಮುತ್ತಿಗೆಹಾಕಿ, ಆತನ ಗೋವುಗಳನ್ನೆಲ್ಲಾ ಸೆರೆಹಿಡಿಯಬೇಕೆಂದೂ, ಧರ್ಮದ ಮೇರೆಮರ್ಯಾದೆಗಳನ್ನು ಅರಿತ ಪಾಂಡವರು ಅವುಗಳನ್ನು ಬಿಡಿಸುವುದಕ್ಕೆ ಬಂದೇಬರುವರೆಂದೂ, ಆಗ ಅವರನ್ನು ಗುರುತಿಸಿ ಮತ್ತೆ ಹದಿಮೂರು ವರುಷ ವನವಾಸಕ್ಕೆ ಅಟ್ಟಬಹುದೆಂದೂ ನಿಶ್ಚಯಿಸಿದನು. ಅವಧಿಯಾಗಲೇ ಪೂರೈಸುತ್ತಾ ಬಂದಿದ್ದುದರಿಂದ ಒಡನೆಯೇ ಸೈನ್ಯವನ್ನು ವಿರಾಟನಗರಿಗೆ ಹೊರಡುವಂತೆ ಆತನು ಅಪ್ಪಣೆ ಮಾಡಿದನು.

ವಿರಾಟನಗರಿಯನ್ನು ಮುತ್ತಲು ಹೊರಟ ಕೌರವನ ಸೈನ್ಯ ಎರಡು ಗುಂಪುಗಳಾಯಿತು. ಒಂದು ಗುಂಪಿಗೆ ಸ್ವತಃ ಕೌರವನೇ ಅಧಿಪತಿ; ಮತ್ತೊಂದಕ್ಕೆ ತ್ರಿಗರ್ತರ ಅಧಿಪತಿಯಾದ ಸುಶರ್ಮನು ಸೇನಾಪತಿ. ಮೊದಲು ಸುಶರ್ಮನು ಧಾಳಿಮಾಡಿ ದಕ್ಷಿಣದಿಕ್ಕಿನ ಗೋವುಗಳನ್ನೆಲ್ಲಾ ಸೆರೆಹಿಡಿದ. ಇದನ್ನು ಪ್ರತಿಭಟಿಸಿದ ಗೊಪಾಲಕರನ್ನೆಲ್ಲಾ ಸೈನಿಕರು ಕತ್ತರಿಸಿ ಹಾಕಿದರು. ಅಳಿದುಳಿದವರು ತಲೆಮರೆಸಿಕೊಂಡು ಓಡಿಹೋಗಿ ವಿರಾಟನಿಗೆ ಈ ಸುದ್ದಿಯನ್ನು ತಿಳಿಸಿದರು. ಇದನ್ನು ಕೇಳಿ ಅತ ಮನಸ್ಸಿನಲ್ಲಿಯೇ

ಮಿಡುಕಿಕೊಂಡ. ಕೀಚಕನ ಮರಣದಿಂದ ಆತನ ಬಲದೋಳೆ
ಬಿದ್ದುಹೋದಂತಾಗಿತ್ತು. ಆದರೂ ಕ್ಷತ್ರಿಯ ಧರ್ಮವನ್ನು ಕೈ
ಕೊಳ್ಳದೆ ಗತ್ಯಂತರವಿಲ್ಲ. ಆದ್ದರಿಂದ ಪುರರಕ್ಷಣೆಗಾಗಿ ರಾಜಕ
ಮಾರನಾದ ಉತ್ತರನನ್ನು ನೇಮಿಸಿ, ಆತನು ಸೈನ್ಯದೊಡ
ಸುಶರ್ಮನಿಗೆ ಇದಿರಾಗಿ ನಡೆದನು. ದಂಡೆತ್ತಿ ಬಂದಿದ್ದ ಕೌ
ವನ ಗುರಿಯೇನೆಂಬುದು ಪಾಂಡವರಿಗೆ ಗೊತ್ತು. ಆದರೂ ತರ
ಹುಯ್ಯಲನ್ನು ಕೇಳಿ ಧರ್ಮರಾಯನು ಜಲಪ್ರಾಶನಮಾಡುವಂ
ರಲಿಲ್ಲ. ಇದರ ಮೇಲೆ ಅವರ ಅಜ್ಞಾತವಾಸದ ಅವಧಿಯ
ಗಲೇ ಪೂರೈಸಿಹೋಗಿತ್ತು. ಆದ್ದರಿಂದ ಅರ್ಜುನನ ಹೊರತ
ಉಳಿದ ನಾಲ್ವರು ಪಾಂಡವರೂ ವಿರಾಟನ ಸೈನ್ಯದೊಡ
ಯುದ್ಧಕ್ಕೆ ಹೊರಟರು. ಅಗತ್ಯಬಿಟ್ಟರೆ ಮಾತ್ರ ಅರ್ಜುನನ
ಯುದ್ಧಕ್ಕೆ ಹೊರಡಬೇಕೆಂದು ಅವರು ತೀರ್ಮಾನಿಸಿಕೊಂಡರು

ಕುರುಸೇನೆಗೂ ವಿರಾಟಸೇನೆಗೂ ಕೈಗೆ ಕೈ ಹತ್ತಿತು
ವಿರಾಟ ಸೇನೆ ಜೀವದ ಹಂಗು ತೊರೆದು ಯುದ್ಧಮಾಡುತ್ತಿ
ದ್ದರೂ ಕೌರವನ ಸೇನೆಯ ಮುಂದೆ ನಿಲ್ಲಲಾಗಲಿಲ್ಲ. ಸು
ರ್ಮನ ಬಾಣಘಾತದಿಂದ ವಿರಾಟನು ಬಸವಳಿದು ಶತ್ರುವಿಗೆ ಕೈ
ಸೆರೆಯಾದನು. ಆತನ ಸೋದರರೂ ಸೈನಿಕರೂ ಮುಂಗಾ
ದಂತಾದರು. ಆಗ ಧರ್ಮರಾಯನು ಭೀಮನನ್ನು "ಅಯ್ಯೋ
ವಿರಾಟನ ಸೇನೆಯೆಲ್ಲಾ ಅನಾಯಕವಾಗುತ್ತಿದೆ; ಅವನ ಕುಲಕ್ಕೆ
ಕೇಡೊದಗಿದಂತಾಗಿದೆ; ಇನ್ನು ಸುಮ್ಮನಿರುವುದು ಅನುಚಿತ
ಮೊದಲು ವಿರಾಟನನ್ನು ಬಂಧಮುಕ್ತನನ್ನಾಗಿ ಮಾಡು
ಎಂದನು. ಅಣ್ಣನ ಮಾತುಗಳಿಂದ ಹುರಿಗೊಂಡ ಭೀಮಸೇ
ನನು ಇದರಿಗಿದ್ದ ಆಲದಮರವೊಂದನ್ನು ಬುಡಸಹಿತ ಕಿತ್ತು
ಕೊಳ್ಳಲು ಕೈನೀಡಿದನು. ಹಾಗೆ ಮಾಡಿದಲ್ಲಿ ತಮ್ಮನ ಪರಿಚಯ

ವನ್ನು ಶತ್ರುಗಳು ಸುಲಭವಾಗಿಯೇ ಗ್ರಹಿಸಿಬಿಡುವರೆಂದು ಧರ್ಮ ರಾಯನು ಆತನನ್ನು ಆ ಕಾರ್ಯದಿಂದ ನಿವಾರಿಸಿದನು. ಭೀಮನಿ ಗೇನು? ಮರವಿಲ್ಲದಿದ್ದರೆ ತನ್ನ ಭುಜಗಳೇ ಸಾಕು. ಆತನ ಬಾಹುಬಲದಿಂದ ಸುಶರ್ಮನ ಸೇನೆ ಕ್ಷಣಮಾತ್ರದಲ್ಲಿ ನಿರ್ನಾ ಮವಾಯಿತು. ಇದನ್ನು ದೂರದಿಂದಲೇ ಕಂಡ ಸುಶರ್ಮ ವಿರಾ ಟನನ್ನು ಕೈಬಿಟ್ಟು ಪ್ರಾಣಭಯದಿಂದ ಓಡಿಹೋದನು. ಅಂದಿನ ರಾತ್ರಿಯ ಯುದ್ಧದಲ್ಲಿ ಧರ್ಮರಾಯನೇ ಸುಶರ್ಮನನ್ನು ಕೈ ಸೆರೆ ಹಿಡಿದು ಗೋಗಣವನ್ನೆಲ್ಲಾ ಬಿಡಿಸಿದನು. ಆತನ ಕರುಣೆ ಯಿಂದ ಸುಶರ್ಮನಿಗೆ ಜೀವದಾನ ದೊರೆಯಿತು. ವಿಜಯಿ ಯಾದ ವಿರಾಟ ಸಂತೋಷ ಸಂಭ್ರಮಗಳಿಂದ ತನ್ನ ಊರಿಗೆ ಹೊರಡಲು ಸಿದ್ಧನಾದನು.

ಅಷ್ಟರಲ್ಲಿ ಕೌರವನ ಕೈಕೆಳಗಿದ್ದ ಸೈನ್ಯ ಉತ್ತರದಿಕ್ಕಿನ ಗೋವುಗಳನ್ನೆಲ್ಲಾ ಸೆರೆಹಿಡಿಯಿತು. ಆಗ ಜೀವಭಯದಿಂದ ಓಡಿ ಹೋಗುತ್ತಿದ್ದ ಗೋಪಾಲಕರಲ್ಲಿ ಒಬ್ಬನನ್ನು ಹಿಡಿದು, ಅವನ ಮೂಗಿನ ಮೇಲೆ ಸುಣ್ಣದ ಬೊಟ್ಟನ್ನಿಟ್ಟು ಕೈಬಿಟ್ಟರು. ಅವನು ಹುಲಿಯ ಬಾಯಿಂದ ತಪ್ಪಿಸಿಕೊಂಡಂತೆ ಓಡಿಬಂದು ರಾಜಸ್ಥಾ ನವನ್ನು ಪ್ರವೇಶಿಸಿದನು. ತ್ರಿಗರ್ತನಮೇಲೆ ಯುದ್ಧಕ್ಕೆ ಹೋಗಿದ್ದ ವಿರಾಟನು ಇನ್ನೂ ಹಿಂದಿರುಗಿರಲಿಲ್ಲವಾದುದರಿಂದ ರಾಜಕು ಮಾರನಾದ ಉತ್ತರನೇ ಸಿಂಹಾಸನದಲ್ಲಿ ಕುಳಿತಿದ್ದನು. ಆತನು ವಿರೂಪಗೊಂಡು ಭಯದಿಂದ ಬಂದ ಗೋಪಾಲಕನನ್ನು ಕಂಡು ಮುಗುಳ್ನಗೆಯನ್ನು ಸೂಸುತ್ತಾ “ಎಲವೋ, ಇದೇನೋ ನಿನ್ನ ಅವಸ್ಥೆ? ಮೂಗಿನ ಮೇಲೆ ಬಿಳುಪೇನು? ಇದೇಕೆ ಭಯ ದಿಂದ ನಡುಗುತ್ತಿದ್ದಿ? ನಿನ್ನ ಅಳ್ಳೆಗಳೇಕೆ ಹೊಯ್ದುಕೊಳ್ಳು ತ್ತಿವೆ? ನಿನ್ನೆತಾನೆ ನಮ್ಮ ತಂದೆ ಯುದ್ಧದಲ್ಲಿ ವಿಜಯವನ್ನು

ಗಳಿಸಿದ್ದಾರೆ, ಮತ್ತೇಕೆ ಈ ಭಯ ? ನೀನು ಸ್ವಲ್ಪವೂ ಭಯ ಪಡಬೇಡ; ಯುದ್ಧವಾರ್ತೆಯನ್ನು ನಿಧಾನವಾಗಿ ಅರುಹು" ಎಂದನು. ಆಗ ಗೋಪಾಲಕನು "ಸ್ವಾಮಿ, ಕುರುಸೇನೆ ಉತ್ತರ ದಿಕ್ಕಿನಿಂದ ಬಂದು ನಮ್ಮ ತುರುಗಳನ್ನು ಸೆರೆ ಹಿಡಿದಿದೆ. ಆನೆ, ಕುದುರೆ, ರಥ, ಕಾಲಾಳುಗಳು ಕಣ್ದಿಟ್ಟಿ ಹರಿಯುವಷ್ಟು ದೂರವೂ ಹರಡಿಕೊಂಡಿವೆ. ತಾವು ಊರೊಳಗಿದ್ದೆ ಯುದ್ಧ ಮಾಡುವಂತಿದ್ದರೆ ಕೋಟೆಯ ರಕ್ಷಣೆಯನ್ನು ಕೈಕೊಳ್ಳಬೇಕು; ಹೊರಕ್ಕೆ ಹೊರಡುವಂತಿದ್ದರೆ ಮೂಲಬಲದೊಡನೆ ಒಡನೆಯೇ ಪ್ರಯಾಣಬೆಳಸಬೇಕು" ಎಂದನು.

ಚಾರನ ಮಾತುಗಳನ್ನು ಕೇಳಿ ಉತ್ತರಕುಮಾರನು ತನ್ನ ಮೀಸೆಗಳನ್ನು ಹುರಿಮಾಡುತ್ತಾ ಸುತ್ತಲೂ ಕುಳಿತಿದ್ದ ತನ್ನ ಮೇಳದ ಕೆಳದಿಯರ ಮೊಗ ನೋಡಿದನು. ಆತನಿಗೆ ವೀರಾವೇಶ ಬಂದಂದಾಯಿತು. "ಯುದ್ಧದ ಬೆದರಿಕೆಯಿಂದ ಬಡಬಡಿಸುತ್ತಿರುವ ಈ ಕುನ್ನಿಯನ್ನು ನೂಕೋ ಅತ್ತ. ನಾನು ಕೋಪಗೊಂಡು ಯುದ್ಧಕ್ಕೆ ನಿಂತರೆ ದೇವತೆಗಳಾದವರು ಕೂಡ ನಡುಗಿಹೋಗುತ್ತಾರೆ. ಈ ಕೌರವ ಕುನ್ನಿಗಳು ನನಗೆ ಲೆಕ್ಕವೆ?' ಎಂದನು. ಆಗ ಚಾರನು ಕತ್ತಲೆಯ ಮೊತ್ತ ಸೂರ್ಯನ ಇದಿರಿನಲ್ಲಿ ನಿಂತೀತೆ? ತಾವು ತಮ್ಮ ಕೈಗುಣವನ್ನು ಶತ್ರುಗಳಿಗೆ ತೋರಿಸಿ, ನಮ್ಮನ್ನು ಉದ್ಧರಿಸಬೇಕು' ಎಂದನು. ಆತನ ಮಾತುಗಳನ್ನು ರಾಜಕುಮಾರನು ಸತ್ಯವೆಂದೇ ನಂಬಿದನು. ಮತ್ತೊಮ್ಮೆ ಆತನ ಕೈ ಬೆರಳುಗಳು ಮೀಸೆಯನ್ನು ಹುರಿಗೊಳಿಸಿದವು. ಮತ್ತೊಮ್ಮೆ ಆತನ ಕಣ್ಣುಗಳು ಸುತ್ತಲೂ ಕುಳಿತಿದ್ದ ಸುಂದರಿಯರನ್ನು ಅವಲೋಕಿಸಿದವು. ಪೌರುಷ ಮತ್ತೊಮ್ಮೆ ಆತನ ನಾಲಿಗೆಯ ಮೇಲೆ ನಲಿದಾಡಿತು. "ಸೋದರರ ರಾಜ್ಯವನ್ನು ಅಪಹರಿಸಿ

ಅವರ ಹೆಂಡತಿಯನ್ನು ಪರಾಭಾವಗೊಳಿಸಿ ಆ ಪಾಂಡವರನ್ನೆಲ್ಲಾ ಅಡವಿಗಟ್ಟಿದ ಮಾತ್ರದಿಂದ ತಾನು ಅಜೇಯನೆಂದು ಭಾವಿಸಿದನೋ ಆ ಕೌರವ? ತನ್ನ ಕೊಬ್ಬಿದ ಭುಜಬಲವನ್ನು ನನ್ನಲ್ಲಿ ತೋರಿಸುವುದಕ್ಕೆ ಹೊರಟು ಬಿಟ್ಟನೋ ಅವನು? ನನ್ನನ್ನೇನು ಆ ಬಡಯುಧಿಷ್ಠಿರನೆಂದು ಬಗೆದನೊ? ನನಗೆ ಕೋಪ ಬಂದರೆ ಅವನ ಕೀರ್ತಿಯನ್ನೆಲ್ಲಾ ಅಳಿಸಿಬಿಡುವೆನೆಂಬುದು ಅವನಿಗೆ ಇನ್ನೂ ಗೊತ್ತಿಲ್ಲ. ಯಮನ ಮೀಸೆಯನ್ನು ಎಳೆದು ತಮಾಷೆ ನೋಡಹೊರಟನೇನೊ! ಮೃತ್ಯುವಿನ ಮೈಮೇಲಿನ ಬಟ್ಟೆಯನ್ನು ಎಳೆದು ಕೆರಳಿಸುವಂತೆ ಅವನು ನನ್ನ ಮೇಲೆ ಏರಿ ಬಂದಿದ್ದಾನೆ. ಅವನಿಗೆ ಎಲ್ಲೊ ಹುಚ್ಚು ಹಿಡಿದಿರಬೇಕು.'' ಎಂದು ಕೂಗಾಡಿದನು. ಕೌರವನ ಸೈನ್ಯದಲ್ಲಿ ತನಗೆ ಸಮಾನರಾರೂ ಇಲ್ಲವೆಂದು ಅವನ ಭಾವನೆ. "ಯಾರೊಡನೆ ಯುದ್ಧ ಮಾಡಲಿ ? ಕೆಲವರು ಹಾರುವರು; ಕೆಲವರು ಯಮನ ನೆರ ಮನೆಯವರು; ಮತ್ತೆ ಕೆಲವರು ಅಧಮಕುಲದಲ್ಲಿ ಹುಟ್ಟಿದದವರು. ಇದರ ಮೇಲೆ, ರಾಜರಾದವರು ಬಂದು ಗೋಗಳನ್ನು ಸೆರೆಹಿಡಿವುದು ಎಲ್ಲಿಯಾದರೂ ಉಂಟೆ? ಕೌರವನು ಅಧಮ ಕಾರ್ಯವನ್ನು ಮಾಡಿ ಶಾಶ್ವತವಾದ ಅಪಕೀರ್ತಿಗೆ ಭಾಜನನಾದ. ಆ ನೀಚನನ್ನು ಸಂಹರಿಸಿ, ಹಸ್ತಿನಾಪುರದಲ್ಲಿ ನಮ್ಮ ಠಾಣೆಯನ್ನಿಡುವೆನು. ಅವನಸೈನ್ಯವನ್ನೆಲ್ಲಾ ದೂಳೀಪಟಮಾಡಿ ಜಯಾಂಗನೆಯನ್ನು ಸೆಳೆತರುವೆನು. ಈಗ ಮಾತನಾಡಿ ಏನು ಪ್ರಯೋಜನ? ಅನ್ಯಾಯವಾಗಿ ನನಗೆ ಸಾರಥಿಯಾಗಬಲ್ಲವನು ನಿನ್ನಿನ ಯುದ್ಧದಲ್ಲಿ ಸತ್ತುಹೋದ. ಈಗ ನನ್ನ ಮನಸ್ಸಿಗೆ ಹೊಂದಿಕೊಳ್ಳುವಂತಹ ಸಾರಥಿಯೊಬ್ಬನು ದೊರೆತರೆ ಕೌರವನ ಸೈನ್ಯಕ್ಕೆಲ್ಲಾ ಹಬ್ಬವನ್ನು ಮಾಡಿಯೇನು" ಎಂದು ಕೊಚ್ಚಿಕೊಂಡನು.

ಉತ್ತರ ಕುಮಾರನು ಹೀಗೆ ತಡೆಬಡೆಯಿಲ್ಲದೆ ಬಾಯಿಗೆ ಬಂದಂತೆ ಹರಟುತ್ತಿದ್ದುದನ್ನು ಕೇಳಿ, ಅಲ್ಲಿಯೇ ಇದ್ದ ಅರ್ಜುನನಿಗೆ ರೇಗಿತು. ದ್ರೌಪದಿಯನ್ನು ಏಕಾಂತವಾಗಿ ಕರೆದು, ತನ್ನನ್ನು ಅರ್ಜುನನ ಸಾರಥಿಯೆಂಬುದಾಗಿ ಉತ್ತರೆಗೆ ಸೂಚಿಸುವಂತೆ ಅವಳಿಗೆ ಹೇಳಿದ. ಅದರಂತೆಯೇ ಆಕೆ ಉತ್ತರೆಯ ಬಳಿಗೆ ಬಂದು "ಅಮ್ಮ, ಹಿಂದೆ ಖಾಂಡವ-ವನ ದಹನ ಕಾಲದಲ್ಲಿ ಈ ಬೃಹನ್ನಳೆ ಅರ್ಜುನನಿಗೆ ಸಾರಥಿಯಾಗಿದ್ದ. ಬೇಕಾದರೆ ಈಗ ರಾಜಕುಮಾರನಿಗೆ ಸಾರಥಿಯಾಗಬಲ್ಲ" ಎಂದಳು. ಇದನ್ನು ಕೇಳಿ ಉತ್ತರೆಗೆ ಬಹು ಸಂತೋಷವಾಯಿತು. ಸಂತೋಷ ನಡಗರಗಳಿಂದ ಅಣ್ಣನ ಬಳಿಗೆ ಬಂದು, ಈ ವಿಚಾರವನ್ನೆಲ್ಲಾ ತಿಳಿಸಿ "ಅಣ್ಣಯ್ಯ, ಈಗಲೇ ಯುದ್ಧಕ್ಕೆ ಹೋಗಿ, ಶತ್ರುಗಳನ್ನೆಲ್ಲಾ ಜಯಿಸು ನಡೆ" ಎಂದಳು. ಉತ್ತರ ಕುಮಾರನು ಅತ್ಯಂತ ಉತ್ಸಾಹದಿಂದ ಈ ಕಾರ್ಯಕ್ಕೆ ಒಪ್ಪಲು, ಉತ್ತರೆಯೇ ಸ್ವತಃ ಹೋಗಿ, ಬೃಹನ್ನಳೆಯನ್ನು ಸಾರಥಿಯಾಗಲು ಒಪ್ಪಿಸಿ ಆಸ್ಥಾನಕ್ಕೆ ಕರೆತಂದಳು. ಆತನನ್ನು ಕುರಿತು ಉತ್ತರ ಕುಮಾರನು "ಎಲೈ ಬೃಹಂದಳೆ, ಅಗ್ಗಳರಾದವರಲ್ಲಿ ವಿಗ್ರಹ ಪ್ರಾಪ್ತವಾಗಿದೆ. ಈ ಸಮಯದಲ್ಲಿ ನನ್ನ ಸಾರಥಿ ಸತ್ತುಹೋಗಿದ್ದಾನೆ. ನೀನು ಸಾರಥಿಯಾಗಿ ನನಗೆ ಸಹಾಯ ಮಾಡಬೇಕು. ನೀನು ಅರ್ಜುನನ ಸಾರಥಿಯಲ್ಲವೆ? ಮಹಾಶೂರನೇ ಇರಬೇಕು" ಎಂದು ಹೊಗಳಿದನು. ಭೀಷ್ಮಾದಿಗಳೊಡನೆ ಸಮರವೆಂದರೆ ಸಾಮಾನ್ಯವಲ್ಲವೆಂದು ಅರ್ಜುನನು ಹೇಳಲು, ಉತ್ತರ ಕುಮಾರನು "ಅಯ್ಯಾ, ನಾನಿರುವಾಗ ಭೀಷ್ಮಾದಿಗಳು ನಿನ್ನನ್ನು ಏನು ಮಾಡಬಲ್ಲರು? ನೀನು ಸ್ವಲ್ಪವೂ ಅಳುಕಬೇಡ. ಕ್ಷಣಮಾತ್ರದಲ್ಲಿ ಕೌರವನ ಕಡೆಯವರನ್ನೆಲ್ಲಾ

ಸವರಿ ಹಾಕುತ್ತೇನೆ. ನಾನು ಯಾರೆಂಬುದು ನಿನಗೆ ಸ್ವಲ್ಪವೂ ಗೊತ್ತಿಲ್ಲ. ದ್ರೋಣ, ಕರ್ಣ, ಅಶ್ವತ್ಥಾಮ ಇತ್ಯಾದಿಗಳೆಲ್ಲರೂ ನಾನು ಕಾಣದವರಲ್ಲ. ನೀನು ನಿರ್ಯೋಚನೆಯಿಂದ ನನಗೆ ಸಾರಥಿಯಾಗು" ಎಂದು ಸಮಾಧಾನಪಡಿಸಿದನು.

ಉತ್ತರ ಕುಮಾರನ ಅಪ್ಪಣೆಯಂತೆ ಅರ್ಜುನನು ಉತ್ತಮಾಶ್ವಗಳನ್ನು ಹೂಡಿದ ರಥವೊಂದನ್ನು ಸಿದ್ಧಪಡಿಸಿದನು. ರಾಣಿವಾಸದ ಹೆಣ್ಣುಗಳಿಂದ ಮಂಗಳಾರತಿಯನ್ನು ಸ್ವೀಕರಿಸಿದ ರಾಜಕುಮಾರನು, ಠೀವಿಯಿಂದ ನಡೆತಂದು ಆ ರಥವನ್ನೇರಿ, ಹೊಂಗೆಲಸದಿಂದ ಕೂಡಿದ ಕವಚವೊಂದನ್ನು ಅರ್ಜುನನಿಗೆ ಬಹುಮಾನವಾಗಿ ಕೊಟ್ಟನು. ಆತನು ಆ ಕವಚವನ್ನು ತಲೆಕೆಳಗಾಗಿ ಧರಿಸಹೊರಡಲು ನೆರೆದ ಹೆಂಗಸರೆಲ್ಲರೂ ಘೊಳ್ಳೆಂದು ನಕ್ಕರು. ಆಗ ಉತ್ತರನು "ಪಾಪ, ಸಾರಥಿಗೆ ಕವಚ ಧರಿಸುವುದು ಗೊತ್ತಿಲ್ಲ. ಅದರಲ್ಲೇನು ತಪ್ಪು?" ಎಂದು ತಾನೆ ಅದನ್ನು ಅವನಿಗೆ ತೊಡಿಸಿದನು. ಅಷ್ಟರಲ್ಲಿ ರಾಜಕುಮಾರಿಯಾದ ಉತ್ತರೆ ಬೃಹಂದಳೆಯ ಬಳಿಗೆ ಬಂದು "ನಮ್ಮಣ್ಣ ಯುದ್ಧದಲ್ಲಿ ಗೆಲ್ಲುತ್ತಾನೆ. ನೀನು ಶತ್ರುಗಳ ರತ್ನಾಭರಣಗಳನ್ನು ಸುಲಿದುಕೊಂಡು ಬಾ" ಎಂದು ಹೇಳಿದಳು. ಅರ್ಜುನನು ಮುಗುಳ್ನಗೆಯನ್ನು ಸೂಸುತ್ತಾ 'ಹಾಗೆಯೆ ಆಗಲಿ' ಎಂದು ಹೇಳಿ, ರಥದ ತೇಜಿಗಳನ್ನು ಚಪ್ಪರಿಸಿದನು. ಅವು ವಾಯುವೇಗವನ್ನೂ ಮೀರಿ ಹೋಗುತ್ತಿರಲು, ರಾಜಕುಮಾರನ ಜೊತೆಯಲ್ಲಿ ಹೊರಟ ಸೈನ್ಯವೆಲ್ಲವೂ ಹಿಂದೆಯೇ ಉಳಿಯಿತು.

ಮೂರುಲೋಕದ ಗಂಡನಾದ ಅರ್ಜುನನು ಉತ್ತರಕುಮಾರನೊಡನೆ ಕ್ಷಣಮಾತ್ರದಲ್ಲಿ ಯುದ್ಧರಂಗವನ್ನು ಸಮೀ

ಪಿಸಿದನು. ಶತ್ರುಮೋಹರದ ಆಯುಧಗಳು ಸೂರ್ಯಕಾಂತಿ ಯಲ್ಲಿ ಧಗಧಗ ಜ್ವಲಿಸುವಂತೆ ಬೆಳಗುತಿದ್ದುದನ್ನು ಕಾಣುತ್ತಲೇ ಉತ್ತರನಿಗೆ ಜೀವ ಝಲ್ಲೆಂದಿತು. ಖಡ್ಗಗಳು ಕಿಡಿಸೂಸುವಂತೆ ಕಾಣುತ್ತಿದ್ದವು; ಭಟರು ಧರಿಸಿದ್ದ ತೊಡವುಗಳು ಬೆಂಕಿಯ ಜ್ವಾಲೆಯಂತೆ ಭಾಸವಾಯಿತು; ಸೈನ್ಯದ ಕಳಕಳಧ್ವನಿಯಿಂದ ಕಿವಿ ಕಿವುಡಾಗುವಂತಾಯಿತು; ಸೈನಿಕರ ಪಾದಘಾತದಿಂದೆದ್ದ ಧೂಳು ಕಪ್ಪಾದ ಹೊಗೆಯಂತೆ ಕಾಣಿಸಿತು; ಸೈನ್ಯವೆಂಬುದು ಆತನಿಗೆ ದಾವಾಗ್ನಿಯಂತೆ ತೋರಿತು. ಅಪಾರವಾಗಿದ್ದ ಆ ಸೇನಾ ಸಮುದ್ರವನ್ನು ಕಂಡು ಆತನಿಗೆ ದಿಕ್ಕೇ ತೋಚದಂತಾ ಯಿತು. "ಇದರೊಡನೆ ಕಾದುವುದೆಂದರೆ ಅದು ಮೃಡನಿಗೆ ಮಾತ್ರವೇ ಸಾಧ್ಯ. ನಾವು ಕಾದಿ ಗೆಲಿವ ಹಾಗೆ ಇದೆ. ಈ ಸೈನ್ಯಕ್ಕೆ ನಮೋ ನಮಃ" ಎಂದು ಕೊಂಡು, ಆತನು "ಅಯ್ಯಾ ಬೃಹಂದಳೆ, ನಾನು ಇಲ್ಲಿಗೆ ಬಂದುದು ಹಸಿಯ ಮಾರಿಯ ಮಂದೆಯೊಳಗೆ ಕುರಿಮರಿ ಬಂದಂತಾಯಿತು. ಇನ್ನು ಮುಂದಕ್ಕೆ ರಥವನ್ನು ನಡೆಸಬೇಡ. ಕೈಯ ಚಾವಟಿಯನ್ನು ಅತ್ತ ಬಿಸುಟು ಕುದುರೆಗಳನ್ನು ಹಿಂದಕ್ಕೆಳೆ. ನಾನು ಏನೋ ಎಂದುಕೊಂಡಿದ್ದೆ; ಕೌರವನ ಸೈನ್ಯವೆಂದರೆ ಸಾಮಾನ್ಯವಲ್ಲ. ಇನ್ನು ರಥವನ್ನು ಹಿಂದಕ್ಕೆ ತಿರುಗಿಸು." ಎಂದನು.

ಅರ್ಜುನನು ಉತ್ತರನ ಮಾತುಗಳಿಗೆ ಗಮನ ಕೊಡಲೇ ಇಲ್ಲ. ರಥವು ಕ್ಷಣ ಕ್ಷಣಕ್ಕೂ ಕೌರವಸೇನೆಗೆ ಸಮೀಪವಾಗು ತ್ತಿತ್ತು. ಇದನ್ನು ಕಂಡು ಉತ್ತರ ಕುಮಾರನ ದೇಹ ನಡುಗ ಲಾರಂಭಿಸಿತು. ಗಂಟಲು ತುಟಿಗಳು ಒಣಗಿಹೋದವು. ಎದು ರಿನ ಭಯಂಕರ ದೃಶ್ಯವನ್ನು ನೋಡಲಾರದೆ ಎರಡೂ ಕೈಗಳಿಂದ ಆತನು ತನ್ನ ಕಣ್ಣುಗಳನ್ನು ಮುಚ್ಚಿಕೊಂಡು "ಅಯ್ಯಾ ಸಾರಥಿ

ರಥವನ್ನು ಮುಂಕ್ಕೆ ಓಡಿಸಿ ಅನ್ಯಾಯವಾಗಿ ನನ್ನ ಕುತ್ತಿಗೆಯ ನ್ನೇಕೆ ಕೊಯ್ಯುತ್ತಿ? ನಿನಗೆ ಸ್ವಲ್ಪವೂ ವಿವೇಕವಿದ್ದಂತೆ ಕಾಣು ವುದಿಲ್ಲ. ನಿಲ್ಲಿಸು ರಥವನ್ನು" ಎಂದು ಕೂಗಿಕೊಂಡನು. ಆದ ರೇನು? ರಥವು ಮುಂದುವರಿಯುವುದು ನಿಲ್ಲಲಿಲ್ಲ. ಇದನ್ನು ಕಂಡು ಉತ್ತರಕುಮಾರನಿಗೆ ಇದೇನೊ ಮಹಾವಿಪತ್ತು ಪ್ರಾಪ್ತವಾಗಲಿದೆಯೆಂಬ ಭಯ ಹುಟ್ಟಿತು. ಆತನ ಕೈಲಿದ್ದ ಬಿಲ್ಲು ಬಾಣಗಳು ಜಾರಿ ಕೆಳಕ್ಕೆ ಬಿದ್ದವು "ಅಯ್ಯಾ, ರಥವನ್ನು ನಿಲ್ಲಿಸೆಂದು ಹೇಳುತ್ತಿರುವ ನಾವು ನಿನ್ನ ಶತ್ರುಗಳೇ? ಅನ್ನ ವಿಟ್ಟ ಸ್ವಾಮಿಗಳಲ್ಲಾ? ಸ್ವಾಮಿದ್ರೋಹ ಮಾಡಬೇಡ. ದಯ ವಿಟ್ಟು ರಥವನ್ನು ನಿಲ್ಲಿಸು" ಎಂದು ಆತನು ದೈನ್ಯದಿಂದ ಬೇಡಿ ಕೊಂಡರೂ ಅರ್ಜುನನು ಮುಗುಳ್ನಗೆಯನ್ನು ಸೂಸುತ್ತಾ ರಥ ವನ್ನು ಮುಂದುವರಿಸುತ್ತಲೇ ಇದ್ದನು. ಉತ್ತರ ಕುಮಾರನು ಗತ್ಯಂತರವಿಲ್ಲದೆ "ಈ ಪಾಪಿ ಸಾರಥಿ ಅನ್ಯಾಯವಾಗಿ ನನ್ನನ್ನು ಕೊಂದ" ಎಂದುಕೊಂಡು, ಉಟ್ಟ ಪಂಚೆಯನ್ನು ಎತ್ತಿ ಕಟ್ಟಿದವನೇ ರಥದ ಹಿಂದಿನಿಂದ ಕೆಳಗೆ ದುಮ್ಮಿಕ್ಕಿ, ಒಂದೇ ಉಸುರಿಗೆ ಹಿಂದಕ್ಕೆ ಓಡಲು ಮೊದಲು ಮಾಡಿದನು.

ಬಿಟ್ಟ ಮಂಡೆಯಿಂದ ಓಡುತ್ತಿದ್ದ ಉತ್ತರನನ್ನು ಕಂಡು ಅರ್ಜುನನು ಕೆರಳಿದನು. ರಥವನ್ನು ಕ್ಷಣಮಾತ್ರ ನಿಲ್ಲಿಸಿ 'ಎಲವೋ, ಮುಂದೆ ಹೆಜ್ಜೆಯಿಟ್ಟರೆ ನಿನ್ನ ಶಿರವನ್ನು ಕಿತ್ತುಹಾಕು ತ್ತೇನೆ' ಎಂದು ಅಬ್ಬರಿಸಿ ಅವನನ್ನು ಬೆಂಬತ್ತಿದನು. ಪ್ರಾಣ ಭಯದಿಂದ ಓಡುತ್ತಿದ್ದ ಉತ್ತರನು ಅವನ ಮಾತುಗಳನ್ನು ಲಕ್ಷಿಸದೆ ಮತ್ತಷ್ಟು ವೇಗದಿಂದ ಓಡಲು ಮೊದಲುಮಾಡಿದನು. ಆದರೇನು? ಅರ್ಜುನನು ನೂರು ಹೆಜ್ಜೆಗಳನ್ನಿಡುವುದರೊಳ ಗಾಗಿ ಅವನು ಸಿಕ್ಕಿಬಿದ್ದನು. ಆಗ ಆತನು ಆ ಹೇಡಿಯನು

ಕುರಿತು " ಎಲವೋ ಹೆಂಗಸರ ಇದಿರಿನಲ್ಲಿ ಅಷ್ಟು ಜೋರಾಗಿ ಹೊಟ್ಟೆ ಕುಟ್ಟಿದೆ! ಈಗ ಕ್ಷತ್ರಿಯ ವಂಶಕ್ಕೆಲ್ಲಾ ಅಪಮಾನವಾಗುವಂತೆ ಓಡಿಹೋಗುವೆಯಾ? " ಎಂದು ಹೇಳಿ ಹಿಂದಕ್ಕೆ ಎಳೆ ತಂದನು. ಉತ್ತರನು ಆತನ ಕಾಲಿಗೆ ಬಿದ್ದು " ಅಯ್ಯಾ ನಿನ್ನ ಹೊಟ್ಟೆಯಲ್ಲಿ ಹುಟ್ಟಿಬಂದವನೆಂದು ಭಾವಿಸುತ್ತೇನೆ, ನನ ಕೈ ಬಿಡು! ನಿನ್ನ ದಮ್ಮಯ್ಯ. ಈ ಶತ್ರು ಸೈನ್ಯಕ್ಕೆ ನನ್ನನ್ನು ಬಲಿಕೊಡುವುದಕ್ಕಿಂತಲೂ ನೀನೆ ಈ ಕಠಾರಿಯಿಂದ ನನ್ನನ್ನು ಇರಿದು ಹಾಕಿಬಿಡು " ಎಂದು ದೈನ್ಯದಿಂದ ಅಂಗಲಾಚಿಕೊಂಡನು. ಇದನ್ನು ಕೇಳಿ ಅರ್ಜುನನಿಗೆ ಪಕ್ಕೆಲಬು ಬಿರಿಯುವಷ್ಟು ನಗು ಬಂದಿತು. " ನಾಡ ನರಿಯಂತೆ ಹಲ್ಲುಗಿಂದ ಮಾತ್ರಕ್ಕೆ ನಿನ್ನನ್ನು ನಾನು ಬಿಡುವುದಿಲ್ಲ; ಯುದ್ಧ ಮಾಡು ನಡೆ. ಯುದ್ಧದಲ್ಲಿ ಬೆನ್ನುಕೊಟ್ಟು ಓಡಿದರೆ ಹೆಜ್ಜೆಹೆಜ್ಜೆಗೂ ಮಹಾ ಪಾತಕ; ಪರಾಕ್ರಮದಿಂದ ಮುಂದುವರಿದರೆ ಹೆಜ್ಜೆಹೆಜ್ಜೆಗೂ ಅಶ್ವಮೇಧ ಫಲ; ಯುದ್ಧದಲ್ಲಿ ಸತ್ತರೆ ವೀರಸ್ವರ್ಗವನ್ನು ಸೂರೆಗೊಳ್ಳಬಹುದು; ದೇವ ಕನ್ಯೆಯರು ನಿನ್ನ ತೊತ್ತಾಗುವರು. ಎಂದು ಆ ರಾಜಕುಮಾರನನ್ನು ಹುರುದುಂಬಿಸಲು ಅರ್ಜುನನು ಪ್ರಯತ್ನಿಸಿದನು. ಆದರೇನು? ಆ ಹೇಡಿ " ಯುದ್ಧದಲ್ಲಿ ಪಲಾಯನ ಮಾಡಿದುದರಿಂದ ಬರುವ ಪಾತಕವನ್ನು ಬ್ರಾಹ್ಮಣರು ಹೋಗಲಾಡಿಸುತ್ತಾರೆ. ಅಶ್ವಮೇಧಯಾಗವನ್ನಾದರೋ ರಾಜಕುಮಾರನಾದ ನಾನು ಪ್ರತ್ಯಕ್ಷನಾಗಿಯೇ ಮಾಡಬಲ್ಲೆ. ಇನ್ನು ವೀರಸ್ವರ್ಗದ ದೇವಕನ್ಯೆಯರು ನನಗೇನೂ ಬೇಡ; ನಮ್ಮ ಅರಮನೆಯ ಸುಂದರಿಯರೇ ಸಾಕು. ನಮ್ಮ ರಾಜ್ಯಪದವಿಯೇ ನಮ್ಮ ಇಂದ್ರಪದವಿ. ಆದ್ದರಿಂದ ದಯವಿಟ್ಟು ನನ್ನನ್ನು ಬಿಟ್ಟು ಬಿಡು. ಜೀವದೊರಸೆ ಬದುಕಿಕೊಳ್ಳುತ್ತೇನೆ ನೀನು ಮಾಡು;

ಈ ಉಪಕಾರಕ್ಕೆ ಪ್ರತಿಯಾಗಿ ನಮ್ಮ ತಂದೆಯಿಂದ ಅಷ್ಟೈಶ್ವರ್ಯ ಗಳನ್ನು ನಿನಗೆ ಕೊಡಿಸಿಕೊಡುತ್ತೇನೆ" ಎಂದು ಹೇಳಿದನು. ಅವನ ಈ ನುಡಿಗಳನ್ನು ಕೇಳಿ ಅರ್ಜುನನಿಗೆ ಅಸಹ್ಯ ಹುಟ್ಟಿತು; "ಎಲವೋ ರಾಜಬಾಹಿರ, ನೀನು ಕಾದುವುದೇನೂ ಬೇಡ. ನಾನೆಲ್ಲ ಯುದ್ಧಮಾಡುತ್ತೇನೆ. ನೀನು ನೆಪಕ್ಕೆ ನನ್ನ ಸಾರಥಿ ಯಾಗಿ ರಥವನ್ನು ನಡೆಸುತ್ತಿರು.'' ಎಂದು ಅವನಿಗೆ ಹೇಳಿದನು. ಅದಕ್ಕೆ ಉತ್ತರನು "ಎಲೋ ಹುಲುಬೃಹನ್ನಳೆ, ಕದನವೆಂ ಬುದೇನು ನಾಟ್ಯವಿದ್ಯೆಯೆಂದು ತಿಳಿದೆಯಾ ? ಹಿಂದೆ ನೀನು ಯಾವ ರಾಜರನ್ನು ಗೆದ್ದು ಪ್ರಸಿದ್ಧನಾಗಿರುವೆ ? " ಎಂದನು. ಇದನ್ನು ಕೇಳಿ ಕುಪಿತನಾದ ಅರ್ಜುನನು "ಎಲೋ ಹೇಳಿದಷ್ಟು ಕೇಳದೆ ಬಾಯಿಗೆ ಬಂದಂತೆ ಹರಟೆಹೊರಟರೆ ನಿನ್ನ ಕಟವಾಯಿ ಯನ್ನು ಸೀಳಿ ಹಾಕುತ್ತೇನೆ.'' ಎಂದು ಹೇಳಿ ಅವನ ಹೆಡತಲೆ ಯನ್ನು ಹಿಡಿದು ರಥಕ್ಕೆಳತಂದನು.

ಅರ್ಜುನನು ಉತ್ತರನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಸಮೀಪದಲ್ಲಿಯೇ ಇದ್ದ ಒಂದು ಶಮೀವೃಕ್ಷದ ಬಳಿಗೆ ಹೋದ ನು. ಆ ಮರದ ಮೇಲೆ ಪಾಂಡವರು ತಮ್ಮ ಆಯುಧಗಳನ್ನೆಲ್ಲಾ ಒಂದು ಹೆಣದ ಆಕಾರದಲ್ಲಿದ್ದ ಚರ್ಮದ ಚೀಲದಲ್ಲಿ ತೆಗೆದಿಟ್ಟಿ ದ್ದರು. ಆ ಮರವನ್ನು ಹತ್ತಿ ಆಯುಧಗಳನ್ನೆಲ್ಲಾ ತೆಗೆದು ಕೊಡುವಂತೆ ಅರ್ಜುನನು ಉತ್ತರನಿಗೆ ಹೇಳಿದನು. ಅವನು ಆ ಆಯುಧಗಳನ್ನು ಕಾಣುತ್ತಲೇ ಬರಸಿಡಿಲನ್ನು ಕಂಡವನಂತೆ ನಡುಗುತ್ತಾ "ಅಯ್ಯಾ ಸಾರಥಿ, ಈ ಆಯುಧಗಳನ್ನು ಮುಟ್ಟು ವುದಕ್ಕೇ ನನಗೆ ಭಯವಾಗುತ್ತಿದೆ." ಎಂದು ಕೂಗಿಕೊಂಡನು. ಆದರೆ ಬೃಹನ್ನಳೆಯು ಬುದ್ಧಿಹೇಳಿದಂತೆ "ಅರ್ಜುನ, ಅರ್ಜುನ" ಎಂದು ಜಪಿಸುತ್ತಾ ಆತನ ಧನುಸ್ಸನ್ನೂ ದಿವ್ಯವಾದ ಬಾಣಗ

ಳನ್ನೂ ಎತ್ತಿಕೊಟ್ಟನು. ಅವನ್ನು ಲೀಲಾಜಾಲವಾಗಿ ತೆಗೆದು ಕೊಳ್ಳುತ್ತಿದ್ದ ಈ ಬೃಹನ್ನಳೆ ಯಾರಿರಬಹುದೆಂದು ಉತ್ತರನು ಸಂದೇಹಿಸುತ್ತಿರಲು ಅರ್ಜುನನು ತನ್ನ ಪರಿಚಯವನ್ನು ಅವನಿಗೆ ಮಾಡಿಕೊಟ್ಟನು. ಊರ್ವಶಿಯಿಂದ ತನಗೆ ಬಂದ ಶಾಪ ಅಂದಿಗೆ ಮುಗಿದು ಹೋದುದರಿಂದ ಆತನು ಕೈಲಿದ್ದ ಬಳೆಗಳನ್ನೆಲ್ಲಾ ಒಡೆದು ಹಾಕಿ, ಉಟ್ಟಿದ್ದ ಸೀರೆಯನ್ನು ವೀರಗಾಸಿಯನ್ನಾಗಿ ಪರಿವರ್ತಿಸಿದನು. ಆತನು ನೆನೆದ ಮಾತ್ರದಿಂದಲೇ ಆಂಜನೇಯನು ಬಂದು ಆತನ ರಥಧ್ವಜದಲ್ಲಿ ಮಂಡಿಸಿದನು. ಆಗ ಅರ್ಜುನನು "ಧರ್ಮರಾಜನಿಗೆ ಜಯವಾಗಲಿ" ಎಂದು ಹೇಳಿ, ಹೆದೆಯೇರಿಸಿದ್ದ ಗಾಂಡೀವವನ್ನು ಠೇಂಕಾರ ಮಾಡುತ್ತಾ ತನ್ನ ರಥವನ್ನು ನಡೆಸಿಕೊಂಡು ಬಂದು ಶತ್ರು ಸೈನ್ಯಕ್ಕೆ ಇದಿರಾಗಿ ನಿಲ್ಲಿಸಿದನು.

ಉತ್ತರನು ರಥದಿಂದ ಕೆಳಕ್ಕೆ ಧುಮ್ಮಿಕ್ಕಿ ಓಡಿ ಹೊರಟುದರಿಂದ ಹಿಡಿದು ಅರ್ಜುನನು ಸಶಸ್ತ್ರನಾಗಿ ಸೇನೆಯನ್ನು ಇದಿರಿಸುವವರೆಗೆ ನಡೆದ ಘಟನೆಗಳೆಲ್ಲವೂ ಕುರುಸೇನೆಗೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ತಮ್ಮನ್ನು ಇದಿರಿಸುತ್ತಿರುವವನು ಅರ್ಜುನನೇ ಸರಿಯೆಂದು ಕೌರವರಿಗೆ ಸ್ಪಷ್ಟವಾಗಿ ಗೊತ್ತಾಯಿತು. ಭೀಷ್ಮ ದ್ರೋಣರು ಪರಸ್ಪರ ಈ ವಿಚಾರವನ್ನು ಮಾತನಾಡಿಕೊಳ್ಳುತ್ತಿರುವಾಗ ಕೌರವನು ಅವರ ಬಳಿಗೆ ಬಂದು "ಅಜ್ಜ, ಪಾಂಡವರ ನೆಲೆ ಅವಧಿಗೆ ಮುನ್ನವೇ ಗೊತ್ತಾದಂತಾಯಿತು. ಆದ್ದರಿಂದ ಈಗ ಅವರು ಮತ್ತೆ ಹದಿಮೂರುವರುಷ ವನವಾಸಕ್ಕೆ ಹೊರಡಬೇಕಲ್ಲವೆ?" ಎಂದು ಉತ್ಸಾಹದಿಂದ ಹೇಳಿಕೊಂಡನು. ಭೀಷ್ಮರು ಅವನ ಲೆಕ್ಕವು ತಪ್ಪೆಂದು ಹೇಳಿ, ಹಿಂದಿನ ದಿನವೇ ಅಜ್ಞಾತವಾಸದ ಅವಧಿ ಮುಗಿಯಿತೆಂದು ತಿಳಿಸಿದರು.

ನೆಂದು ಜನರೆಲ್ಲರೂ ಹೆದರುತ್ತಿರಲು ಭೀಷ್ಮ, ದ್ರೋಣ, ಕರ್ಣ, ಶಕುನಿ, ಜಯದ್ರಥ ಮೊದಲಾದ ಕುರುವೀರರೆಲ್ಲರೂ ಒಟ್ಟಾಗಿ ಅರ್ಜುನನನ್ನು ಇದಿರಿಸಿದರು. ಆ ವೇಳೆಗೆ ಅರ್ಜುನನು ಕೌರವರು ಸೆರೆಹಿಡಿದಿದ್ದ ತುರುಗಳನ್ನೆಲ್ಲಾ ಬಂಧವಿಮುಕ್ತವನ್ನಾಗಿ ಮಾಡಿ ಕೌರವವೀರರೊಡನೆ ಯುದ್ಧಕ್ಕೆ ಸನ್ನದ್ಧನಾದನು. ಆತನ ಬಾಣಘಾತದಿಂದ ಕೃಪನ ಶಿರಸ್ತ್ರಾಣ ಸೀಳಿತು; ಭೀಷ್ಮರ ಕವಚ ಹರಿದು ಹೋಯಿತು; ದ್ರೋಣರಿಗೆ ಮೈನೋವಾಯಿತು; ಕರ್ಣನಿಗೆ ಮೈಯೆಲ್ಲಾ ಗಾಯವಾಯಿತು; ಅಶ್ವತ್ಥಾಮ ಮೈಮರೆತ; ಉಳಿದ ಶೂರರೆಲ್ಲರೂ ಶಕ್ತಿಗುಂದಿ ಸಪ್ಪಗಾದರು. ಆದರೂ ಭೀಷ್ಮದ್ರೋಣರ ಪ್ರೋತ್ಸಾಹದಿಂದ ಎಲ್ಲರೂ ಹುರಿಗೊಂಡು ಮತ್ತೆ ಅರ್ಜುನನನ್ನು ಮುಸುಕಿದರು. ಅವರು ಎಲ್ಲರೂ ಒಂದೇ ಬಾರಿಗೆ ಬಿಟ್ಟ ಬಾಣಗಳಿಂದ ಅರ್ಜುನನು ಕ್ಷಣಕಾಲ ಮುಳುಗಿಹೋದನು. ಆದರೂ ಮೋಡವನ್ನು ಸೀಳಿ ಹೊರಕ್ಕೆ ಬರುವ ಸೂರ್ಯನಂತೆ ಆತನು ಅವರ ಬಾಣಗಳನ್ನೆಲ್ಲಾ ನಿವಾರಿಸಿಕೊಂಡು, ಅತಿರಥಮಹಾರಥರನ್ನೆಲ್ಲಾ ಒಬ್ಬೊಬ್ಬರನ್ನಾಗಿ ಭಂಗಿಸುತ್ತಾ ಹೊರಟನು. ಅತನ ಬಾಣಗಳಿಂದ ಭೂವ್ಯಾಕಾಶಗಳು ತುಂಬಿ ಹೋಗಿ ಶತ್ರುಸೈನ್ಯ ಕಣ್ಣಿಗೆ ಕಾಣದಂತಾಯಿತು. “ಅರ್ಜುನನಿಗೆ ತಾನು ಸರಿಯೆಂಬುವನ ಬಾಯಿ ಹುಳಿತುಹೋದೀತು” ಎಂದು ಜನರೆಲ್ಲರೂ ಆತನನ್ನು ಮುಕ್ತಕಂಠರಾಗಿ ಹೊಗಳಿದರು. ಕರ್ಣ, ದ್ರೋಣ, ಭೀಷ್ಮ ಮೊದಲಾದವರು ಆತನಿಂದ ಸೋತು ಹಿಂದಿರುಗಿದ ಮೇಲೆ ಕೌರವನೇ ಸ್ವತಃ ಆತನನ್ನು ಇದಿರಿಸಿದನು. ಸೈನ್ಯವೆಲ್ಲವೂ ಆತನನ್ನು ಸಂರಕ್ಷಿಸಲು ಸಿದ್ಧವಾಗಿ ನಿಂತಿತು. ಒಬ್ಬೊಬ್ಬರೊಡನೇ ಯುದ್ಧಮಾಡುತ್ತಾ ಹೋಗುವುದು ಸರಿಯಲ್ಲವೆಂದು

ಕೊಂಡ ಅರ್ಜುನನು, ಎಲ್ಲರನ್ನೂ ಒಮ್ಮೆಯೇ ಗೆಲ್ಲಲು ಸಹಾಯಕವಾಗುವಂತೆ ಸಮ್ಮೋಹನಾಸ್ತ್ರವನ್ನು ಹೂಡಿದನು. ಆ ಬಾಣಪ್ರಯೋಗದಿಂದ ಕೌರವ ಸೇನೆಯೆಲ್ಲವೂ ಮೈಮರೆತು ಮಲಗಿತು.

ಸಮ್ಮೋಹನಾಸ್ತ್ರದ ಪ್ರಭಾವದಿಂದ ಕೌರವನೂ ಅವನ ಕಡೆಯವರೂ ಮೈಮರೆತು ಮಲಗಲು ಅರ್ಜುನನು ರಥದಿಂದಿಳಿದು ಶತ್ರು ಸೇನೆಯನ್ನು ಪ್ರವೇಶಿಸಿದನು. ಅಲ್ಲಿ ಮಲಗಿದ್ದ ದ್ರೋಣರಿಗೂ ಭೀಷ್ಮರಿಗೂ ಆತನು ಕಾಲುಮುಟ್ಟಿ ನಮಸ್ಕರಿಸಿದನು ಅನಂತರ ಕರ್ಣ, ದುರ್ಯೋಧನ, ದುಃಶ್ಯಾಸನ ಮೊದಲಾದವರ ವಸ್ತ್ರಭೂಷಣಗಳನ್ನೆಲ್ಲಾ ಸುಲಿದುಕೊಳ್ಳುವಂತೆ ಉತ್ತರನನ್ನು ನೇಮಿಸಿದನು. ಆತನು ಅದನ್ನು ಪೂರೈಸುವಷ್ಟರಲ್ಲಿ ಭೀಷ್ಮರು ಎಚ್ಚತ್ತು ಅರ್ಜುನನ ಕಡೆ ಮತ್ತೆ ಬಾಣಪ್ರಯೋಗ ಮಾಡಿದರು. ಆದರೆ ಅರ್ಜುನನು ಎರಡು ಬಾಣಗಳಿಂದ ಅವರನ್ನು ಅಡಗಿಸಿ, ಉತ್ತರನೊಡನೆ ವಿರಾಟನಗರಿಗೆ ಹಿಂದಿರುಗಿದನು.

ಊರಿಗೆ ಹಿಂದಿರುಗುತ್ತಿರುವಾಗ ಅರ್ಜುನನು ಉತ್ತರನನ್ನು ಕುರಿತು "ಅಯ್ಯಾ, ನೀನೇ ಯುದ್ಧವನ್ನು ಜಯಿಸಿದೆನೆಂದು ಎಲ್ಲರಿಗೂ ಹೇಳು. ನಾನು ಯಾರೆಂಬುದನ್ನು ಈಗಲೇ ಯಾರಿಗೂ ತಿಳಿಸಬೇಡ. ರಾಜನು ನಿನ್ನನ್ನೇ ಪುರಸ್ಕರಿಸಲಿ" ಎಂದನು. ಉತ್ತರನು "ತಮ್ಮ ಅಪ್ಪಣೆಯಂತೆ ನಡೆದುಕೊಳ್ಳುತ್ತೇನೆ." ಎಂದು ಹೇಳಿ, ಊರ ಬಳಿಗೆ ಬರುತ್ತಲೇ ತನ್ನ ವಿಜಯವಾರ್ತೆಯನ್ನು ರಾಜನಿಗೆ ತಿಳಿಸುವಂತೆ ದೂತನೊಬ್ಬನಿಗೆ ಆಜ್ಞಾಪಿಸಿದನು. ವಿರಾಟರಾಯನು ತನ್ನ ಮಗನು ಯುದ್ಧಕ್ಕೆ ಹೊರಟಿರುವ ಸುದ್ಧಿಯನ್ನು ಕೇಳಿ ಎದೆಗುದಿಗೊಳ್ಳು

ತ್ತಿರಲು, ದೂತನಿಂದ ವಿಜಯವಾರ್ತೆ ಆತನಿಗೆ ಗೊತ್ತಾಯಿತು. ಕೇಳಿ ಆತನ ಸಂತೋಷಕ್ಕೆ ಪಾರವಿರಲಿಲ್ಲ. ದೂತನಿಗೆ ಬಹುಮಾನವಿತ್ತು, ರಾಜಕುಮಾರನನ್ನು ಮಹೋತ್ಸವದಿಂದ ಅರಮನೆಗೆ ಕರೆತರುವಂತೆ ಅಪ್ಪಣೆ ಮಾಡಿದನು. ಈ ಸಂತೋಷದ ಉಬ್ಬಿನಲ್ಲಿ ಆತನಿಗೆ ಜೂಜಾಡಬೇಕೆನ್ನಿಸಿತು. ಸಮೀಪದಲ್ಲಿಯೇ ಇದ್ದ ಕಂಕಭಟ್ಟನೊಡನೆ ದ್ಯೂತಕೇಳಿಗೆ ಆರಂಭಿಸಿದನು. ಆಟವಾಡುತ್ತಾ ಆಡುತ್ತಾ ಆತನು "ಅಯ್ಯಾ ಕಂಕಭಟ್ಟ, ಪರಶಿವನಿಗೂ ಅಸಾಧ್ಯರಾದ ಕೌರವರನ್ನು ನನ್ನ ಮಗ ಗೆದ್ದುಬಿಟ್ಟಿದ್ದಾನೆ. ದೇವ ಮಾನವರಲ್ಲಿ ನನ್ನ ಮಗನಿಗೆ ಸಮಾನರೇ ಇಲ್ಲವೆಂದು ಹೇಳಬಹುದು" ಎಂದು ಉಬ್ಬಿ ನುಡಿದನು. ಅದನ್ನು ಕೇಳಿ ಧರ್ಮಜನು "ಅಹುದು, ಜಗದ್ವಿಖ್ಯಾತನಾದ ಸಾರಥಿಯಿರುವಾಗ ಕುಮಾರನಿಗೆ ಬಂದ ಭಯವೇನು ?" ಎಂದನು. ಈ ಮಾತನ್ನು ಕೇಳಿ ವಿರಾಟನಿಗೆ ರೇಗಿ ಹೋಯಿತು. ಎಲವೊ ಕಂಕ, ನನ್ನ ಮಗನ ಅಭ್ಯುದಯವನ್ನು ಕಂಡು ನಿನಗೆ ಅಸೂಯೆಯೆಂದು ತೋರುತ್ತದೆ. ಸಾರಥಿಯಾದ ಬೃಹಂದಳೆ ಮಹಾಪರಾಕ್ರಮಿಯೊ ? ನನ್ನ ಮಗ ಶುದ್ಧ ಹೇಡಿಯೆಂದು ಭಾವಿಸಿದೆಯೇನೊ ! " ಎಂದು ಆತನನ್ನು ಛೀಗುಟ್ಟಿದನು. ಆದರೂ ಧರ್ಮರಾಯನು ಪ್ರಶಾಂತನಾಗಿ " ಆಯ್ಯಾ ನಿನ್ನ ಮಗ ನಿನ್ನ ಕಣ್ಣುಗಳಿಗೆ ಮಹಾಸತ್ವನಂತೆ ತೋರಿಬರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಸಾಂಸಾರಿಕ ಭ್ರಮೆಯೇ ಅಂತಹುದು. ಆದರೂ ನಾನು ಹೇಳುತ್ತೇನೆ, ತಿಳಿದುಕೋ. ಗೆದ್ದವ ಬೃಹನ್ನಳೆ. ಭೀಷ್ಮದ್ರೋಣಾದಿಗಳು ಉತ್ತರಕುಮಾರನಿಗೆ ಸೋಲುವಂತಹ ಹೇಡಿಗಳಲ್ಲ" ಎಂದನು.

ಧರ್ಮರಾಯನ ಬಾಯಿಂದ ಈ ಮಾತುಗಳು ಹೊರಡು ತ್ತಿದ್ದಂತೆಯೇ ರೋಷಾವಿಷ್ಟನಾದ ವಿರಾಟನು ಹೊನ್ನದಾಳದಿಂದ ಆತನ ಹಣೆಯಮೇಲೆ ಹೊಡೆದನು. ಒಡನೆಯೇ ಛಿಲ್ಲೆಂದು ರಕ್ತಹಾರಿತು. ಧರ್ಮಜನು ಅದನ್ನು ಕೆಳಕ್ಕೆ ಬೀಳದಂತೆ ತಡೆದು, ಸಮೀಪದಲ್ಲಿಯೇ ಇದ್ದ ದ್ರೌಪದಿಯ ಮುಖವನ್ನು ನೋಡಿ ದನು. ಆಕೆ ಭಯದಿಂದ ನಡುಗುತ್ತ ಓಡಿಬಂದು ಸುರಿಯು ತ್ತಿದ್ದ ರಕ್ತವನ್ನು ತನ್ನ ಸೀರೆಯಿಂದ ಒರಸಿದಳು. ಇದನ್ನು ಕಂಡು ವಿರಾಟನಿಗೆ ಆಶ್ಚರ್ಯವಾಯಿತು. "ಎಲೈ ಸೈರೇಂಧ್ರಿ, ಈತನ ಹಣೆಯಲ್ಲಿ ರಕ್ತಸುರಿದರೆ ನೀನೇಕೆ ಅದನ್ನು ಒರೆಸಬೇಕು? ಎಂದನು. ಆಕೆ "ಅಯ್ಯಾ ಈತನ ರಕ್ತ ಒಂದು ತೊಟ್ಟು ನೆಲಕ್ಕೆ ಬಿದ್ದರೆ ಬೃಹನ್ನಳೆಯು ಈ ರಾಜ್ಯವನ್ನೇ ಒರಸಿಹಾಕುವನು. ಅದು ಆತನ ಪ್ರತಿಜ್ಞೆ" ಎಂದಳು. ವಿರಾಟನಿಗೆ ಅವಳ ಮಾತು ಗಳು ಸ್ವಲ್ಪವೂ ಅರ್ಥವಾಗಲಿಲ್ಲ. ಕಂಕನ ರಕ್ತವನ್ನು ಸೈರಂ ಧ್ರಿಯೇಕೆ ತಡೆದು ನಿಲ್ಲಿಸಬೇಕು? ಅವನ ರಕ್ತ ನೆಲಕ್ಕೆ ಬಿದ್ದರೆ ಬೃಹಂದಳೆಯೇಕೆ ರಾಜ್ಯವನ್ನು ನಾಶಮಾಡಬೇಕು? ಕಥೆಯ ತಲೆ ಬಾಲಗಳೇ ಆತನಿಗೆ ತಿಳಿದುಬರಲಿಲ್ಲ.

ಅಷ್ಟರಲ್ಲಿ ಅತ್ತ ಉತ್ತರ ಕುಮಾರನಿಗೆ ಇದಿರುಗೊಳ್ಳುವ ದಿಬ್ಬಣ ಊರಲ್ಲಿ ಆರಂಭವಾಯಿತು. ಮಂತ್ರಿಗಳು ಆತನನ್ನು ಗೌರವದಿಂದ ಇದಿರುಗೊಂಡರು; ಸುಮಂಗಲಿಯರು ಆತನಿಗೆ ಅಕ್ಷತೆಯನ್ನು ಸೂಸಿ ಆರತಿಯನ್ನು ಬೆಳಗಿದರು. ಮಂಗಳ ವಾದ್ಯಗಳು ಭೋರ್ಗರೆಯುತ್ತಿರಲು ಆತನನ್ನು ಅತ್ಯಂತ ಉತ್ಸವ ದಿಂದ ಅರಮನೆಗೆ ಕರೆತಂದರು. ರಾಜನು ಮಗನನ್ನು ಅತ್ಯಂತ ಸಂತೋಷದಿಂದ ಆಲಂಗಿಸಿದನು. "ವಂಶದ ಚಿಂತಾಮಣಿ, ಬಂದೆಯಾ? ಕೌರವ ಸೈನ್ಯದ ಧೂಮಕೇತುವೇ ಬಂದೆಯಾ?"

ಎಂದು ಆತನನ್ನು ಉಪಚರಿಸುತ್ತಾ ಅರಮನೆಯೊಳಕ್ಕೆ ಕರೆದೊಯ್ದು ಸಿಂಹಾಸನದ ಮೇಲೆ ಕೂಡಿಸಿದನು. ಹೆಂಗಸರು ಆತನಿಗೆ ಉಪ್ಪಾರತಿಯನ್ನು ಎತ್ತಿ, ವಸ್ತ್ರಾಭರಣಗಳನ್ನು ನಿವಾಳಿ ತೆಗೆದು ಹಾಕಿದರು. ಉತ್ತರಕುಮಾರನಿಗೆ ಇದನ್ನೆಲ್ಲಾ ಕಂಡು ಮನಸ್ಸಿನಲ್ಲಿ ಕಸಿವಿಸಿಯಾಯಿತು. ಆತನು "ಅಪ್ಪಾ, ಈ ಬರಿಯ ಆಡಂಬರವೆಲ್ಲಾ ಬೇಡ. ನನಗೆ ನಾಚಿಕೆಯಾಗುತ್ತಿದೆ. ನಾನೆಂದರೇನು, ಕೌರವರನ್ನು ಗೆಲ್ಲುವುದೆಂದರೇನು? ಇದೆಲ್ಲವೂ ಅರ್ಜುನನ ಕೆಲಸ. ಈಗ ನನ್ನನ್ನು ಬಿಟ್ಟುಬಿಡಿ. ಅರ್ಜುನದೇವನನ್ನು ನಿಮಗೆ ತೋರಿಸುತ್ತೇನೆ" ಎಂದು ಹೇಳಿ ತನ್ನ ಅರಮನೆಗೆ ಹಿಂದಿರುಗಿದನು.

ಇತ್ತ ಪಾಂಡವರು ಮರುದಿನ ಪ್ರಾತಃಕಾಲ ಮಂಗಳ ಮಜ್ಜನವನ್ನು ಪೂರೈಸಿ, ಗಂಧಮಾಲ್ಯಾಂಬರಗಳಿಂದ ಭೂಷಿತರಾಗಿ ವಿರಾಟನ ಅರಮನೆಯನ್ನು ಪ್ರವೇಶಿಸಿದರು. ಧರ್ಮರಾಯನು ರಾಜನ ಸಿಂಹಾಸನವನ್ನು ಏರಿ ಕುಳಿತನು; ಆತನ ಸೋದರರು ಆತನ ಚರಣಗಳ ಬಳಿಯಲ್ಲಿ ಕುಳಿತರು. ತೇಜಃಪುಂಜರಾದ ಇವರನ್ನು ಕಂಡ ಅರಮನೆಯ ಕಂಚುಕಿಗಳು ವಿರಾಟರಾಜನ ಬಳಿಗೆ ಹೋಗಿ ಈ ವಿಚಾರವನ್ನು ಆತನಲ್ಲಿ ಅರಿಕೆ ಮಾಡಿಕೊಂಡರು. ಆತನು ತನ್ನ ಮಂತ್ರಿ ಪುರೋಹಿತರನ್ನೂ ಉತ್ತರ ಕುಮಾರನನ್ನೂ ಮುಂದಿಟ್ಟುಕೊಂಡು ತನ್ನ ಓಲಗ ಶಾಲೆಗೆ ಬಂದು, ಅಲ್ಲಿ ಕುಳಿತಿದ್ದ ಪಾಂಡವರನು ಕಂಡನು. ಆತನಿಗೆ ಅಪರಾಧಿಬಹುದೆಂದು ಅತ್ಯಂತ ಆಶ್ಚರ್ಯವಾಯಿತು. ಅವರ ವಿಚಾರವನ್ನೆಲ್ಲಾ ಅರ್ಜುನನಿಂದ ಆಗಲೆ ಅರಿತಿದ್ದ ಉತ್ತರ ಕುಮಾರನು ಅವರನ್ನೆಲ್ಲಾ ತಂದೆಗೆ ಪರಿಚಯ ಮಾಡಿಕೊಟ್ಟನು. ಇದನ್ನು ಕೇಳುತ್ತಲೇ ವಿರಾಟನು ಭಯ

ದಿಂದ ನಡುಗುತ್ತಾ ರತ್ನಖಚಿತವಾದ ದಿವ್ಯಾಭರಣಗಳನ್ನು ಅವರಿಗೆ ಕಾಣಿಕೆಯಾಗಿ ಅರ್ಪಿಸಿ "ಮಹಾರಾಜ, ನನ್ನ ಸರ್ವಾಪರಾಧಗಳನ್ನು ಮನ್ನಿಸಿ ನನ್ನನ್ನು ಉದ್ಧರಿಸು" ಎಂದು ಧರ್ಮರಾಯನ ಕಾಲುಗಳಿಗೆ ನಮಸ್ಕರಿಸಿದನು. ಆ ವೇಳೆಗೆ ಈ ಸುದ್ದಿಯನ್ನು ಕೇಳಿದ ಸುದೇಷ್ಣಾದೇವಿ ತನ್ನ ಮಗಳೊಡನೆಯೂ ಪರಿವಾರದೊಡನೆಯೂ ಅಲ್ಲಿಗೆ ಬಂದು ದ್ರೌಪದೀದೇವಿಗೆ ಕಾಣಿಕೆಯನ್ನು ಅರ್ಪಿಸಿದಳು. ವಿರಾಟಮಹಾರಾಜನು ಅಂದೇ ಧರ್ಮರಾಜನನ್ನು ತನ್ನ ರಾಜ್ಯಕ್ಕೆ ಅಧಿಪತಿಯಾಗಿ ಪಟ್ಟಾಭಿಷೇಕ ಮಾಡುವೆನೆಂದು ಹೇಳಿದನು. ಆದರೆ ಧರ್ಮರಾಜನು ಮುಗುಳ್ನಗೆಯನ್ನು ಸೂಸುತ್ತಾ "ಅಯ್ಯಾ ನಿನ್ನ ಮಧುರ ನುಡಿಗಳ ಅಭಿಷೇಕದಿಂದಲೇ ನಾನು ಸಂತೃಪ್ತನಾಗಿದ್ದೇನೆ. ಇನ್ನು ಬೇರೆ ಪಟ್ಟಾಭಿಷೇಕವೇನೂ ಬೇಡ" ಎಂದು ಆತನನ್ನು ಮೃದುನುಡಿಗಳಿಂದ ಆದರಿಸಿದನು. ಆಗ ಉತ್ತರನು ಮುಂದೆ ಬಂದು ಧರ್ಮರಾಯನಿಗೆ ನಮಸ್ಕರಿಸಿ "ಪ್ರಭು, ಈ ನನ್ನ ತಂಗಿ ಉತ್ತರೆಯನ್ನು ಅರ್ಜುನದೇವನಿಗೆ ಅರ್ಪಿಸಲು ತಮ್ಮ ಅನುಮತಿಯನ್ನಿತ್ತು ಅನುಗ್ರಹಿಸಬೇಕು" ಎಂದು ಕೇಳಿಕೊಂಡನು. ಧರ್ಮರಾಯನು ಇದಕ್ಕೆ ಪ್ರತ್ಯುತ್ತರವನ್ನೀಯಲು ಅರ್ಜುನನ ಮುಖವನ್ನು ನೋಡಿದನು. ಆತನು "ಮಹಾರಾಜ, ನಾನು ಇವಳಿಗೆ ಒಂದು ವರ್ಷ ಪಾಠಹೇಳಿದ್ದೇನೆ. ಅವಳು ನನಗೆ ಮಗಳಿದ್ದ ಹಾಗೆ. ನಿಮಗೆ ಇಷ್ಟವಿದ್ದರೆ ಅವಳನ್ನು ಅಭಿಮನ್ಯುವಿಗೆ ವಿವಾಹಮಾಡಿ ಕೊಡಿ" ಎಂದನು. ವಿರಾಟನು ಇದಕ್ಕೆ ಸಂತೋಷದಿಂದ ಒಪ್ಪಿದನು. ಒಡನೆಯೇ ಪಾಂಡವರು ಈ ವಿಚಾರವನ್ನು ಶ್ರೀ ಕೃಷ್ಣ ಪರಮಾತ್ಮನಿಗೆ ತಿಳಿಸುವಂತೆ ಹೇಳಿ ಕಾಣಿಕೆಗಳೊಡನೆ ದೂತರನ್ನು ದ್ವಾರಕಿಗೆ ಅಟ್ಟಿದರು.

ಪಾಂಡವರ ಏಳಿಗೆಯನ್ನು ದೂತಮುಖದಿಂದ ಕೇಳಿದ ಶ್ರೀ ಕೃಷ್ಣನು ಒಡನೆಯೇ ಬಂಧುಬಾಂಧವರೊಡನೆ ವಿರಾಟ ನಗರಿಗೆ ಹೊರಟುಬಂದನು. ಆತನ ಬರವಿನಿಂದ ವಿರಾಟ ನಗರವೆಲ್ಲಾ ಸಂತೋಷ ಸಂಭ್ರಮಗಳಲ್ಲಿ ನಲಿದಾಡಿತು. ಅನಂತರ ಆತನ ಅಭಿಪ್ರಾಯದಂತೆ ಒಂದು ದಿವಸ ಶುಭ ಮುಹೂರ್ತದಲ್ಲಿ ಉತ್ತರೆ ಅಭಿಮನ್ಯುಗಳ ವಿವಾಹ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ವಿರಾಟಮಹಾರಾಜನು ರಾಜ್ಯ, ಭಂಡಾರ, ಆನೆ, ಕುದುರೆ, ದಾಸಿಯರು ಇತ್ಯಾದಿ ಅಸಂಖ್ಯಾತ ಬಳುವಳಿಯನ್ನು ಅಳಿಯನಿಗೆ ಕೊಟ್ಟು ಗೌರವಿಸಿ ದುದಲ್ಲದೆ ಮದುವೆಗೆಂದು ಬಂದಿದ್ದ ಬಂಧುಬಾಂಧವರಿಗೂ ರಾಜಾಧಿರಾಜರಿಗೂ ಅನೇಕ ವಸ್ತ್ರಾಭರಣಗಳನ್ನು ಉಡುಗೊರೆ ಯಾಗಿ ಕೊಟ್ಟು ಅವರನ್ನು ಸಂತೋಷಗೊಳಿಸಿದನು. ಶ್ರೀ ಕೃಷ್ಣಪರಮಾತ್ಮನು ನೂತನ ವಧೂವರರನ್ನು [illegible] ಬಂದಿದ್ದ ಇತರರನ್ನೂ ಬಾಯ್ತುಂಬ ಹರಸಿ ಅವರನ್ನು ಉದ್ಧರಿ ಸಿದನು. ಆತನ ಆಗಮನದಿಂದ ತಮ್ಮ ಉತ್ತರೋತ್ತರ ವೃದ್ಧಿಯಾದಂತಾಯಿತೆಂದು ಪಾಂಡವರು ಭಾವಿಸಿದರು.

# ವಿಮರ್ಶೆ

ನಮ್ಮ ಮಾಲೆಯಲ್ಲಿ ಪ್ರಕಟವಾಗುತ್ತಿರುವ ಕುಮಾರ ವ್ಯಾಸಭಾರತದ ಮೊದಲನೆಯ ಸಂಪುಟವಾದ ' ಉದ್ಯೋಗ ಪರ್ವಸಂಗ್ರಹ' ವಿಮರ್ಶೆಯನ್ನು 'ಭಾರತೇ ಸಾರಮುದ್ಯೋಗಃ' ಎಂಬ ಆರ್ಯೋಕ್ತಿಯನ್ನು ನೆನಪಿಗೆ ತಂದುಕೊಂಡು ಮುಕ್ತಾಯಗೊಳಿಸಲಾಗಿತ್ತು. ಈ ಮಾತು ವಿರಾಟಪರ್ವಕ್ಕೆ ಹೆಚ್ಚು ಉಚಿತವಾಗಿ ಅನ್ವಯಿಸುತ್ತದೆ. ಹೀಗೆ ಹೇಳಲು ಕಾರಣಗಳುಂಟು. ಮಹಾಭಾರತದ ತಿರುಳೆಂದರೆ ವಿರಾಟಪರ್ವ. ಪಾಂಡವರ ಅಜ್ಞಾತವಾಸ ಕೊನೆಗೊಂಡು ಅವರ ಅಭ್ಯುದಯ ಮೊದಲಾಗುವುದು ಈ ಪರ್ವದ ಕೊನೆಯಲ್ಲಿ. ಅಭಿಮನ್ಯುವಿನ ಮದುವೆ ಈ ಅಭ್ಯುದಯಕ್ಕೆ ಮುಂಗಾಣ್ಕೆ. ಈ ಕಾರಣದಿಂದಲೋ ಏನೋ ನಮ್ಮವರು ರಾಮಾಯಣವನ್ನು ಸುಂದರ ಕಾಂಡದಿಂದ ಓದಲು ಪ್ರಾರಂಭಿಸುವಂತೆ, ಮಹಾಭಾರತವನ್ನು ವಿರಾಟಪರ್ವದಿಂದ ಪ್ರಾರಂಭಿಸುತ್ತಾರೆ. ಇದಲ್ಲದೆ ವಿರಾಟ ಪರ್ವದ ತುಂಬ ವೈಸಿಮಿರಿಸುವಂತಹ ಘಟನೆಗಳಿವೆ. ಈ ಪರ್ವದಲ್ಲಂತೂ ಕುಮಾರವ್ಯಾಸನು ಉತ್ತಮನಾದ ಸಂಗ್ರಹ ಕಾರನಾಗಿದ್ದಾನೆ. ಪಾಂಡವರು ವಿರಾಟನ ಬಳಿ ಸೇವಾವೃತ್ತಿಗೆ ನಿಂತದ್ದು, ಕೀಚಕನು ದ್ರೌಪದಿಯನ್ನು ಕಾಮಿಸಿ ಭೀಮನಿಂದ ಹತನಾದದ್ದು, ದಕ್ಷಿಣ ಗೋಗ್ರಹಣ, ಉತ್ತರನ ಪೌರುಷ, ಉತ್ತರ ಗೋಗ್ರಹಣದಲ್ಲಿ ಅರ್ಜುನನು ಕೌರವರನ್ನು ಜಯಿಸಿದ್ದು, ವಿರಾಟನು ಧರ್ಮರಾಜನನ್ನು ದಾಳದಿಂದ ಹೊಡೆದದ್ದು, ಪಾಂಡವರ ಅಭ್ಯುದಯ ಹಾಗೂ ಉತ್ತರೆಯ ಮದುವೆ. ಎಷ್ಟೊಂದು ವೈವಿಧ್ಯಪೂರ್ಣವಾದ ಘಟನೆಗಳು! ಮಹಾ

ಭಾರತದ ಯಾವ ಅಧ್ಯಾಯವೂ ಇಲ್ಲಿ ಬೀಳಾಗಿ ತೋರುವುದಿಲ್ಲ. ಮೂರನೆಯದಾಗಿ ಮಹಾಭಾರತದ ಪ್ರಧಾನರಸ ವೀರ. ಆ ರಸದ ಪ್ರತಿಪಾದನೆಗೆ ಇಲ್ಲಿ ಯಥೇಚ್ಛವಾಗಿ ಅವಕಾಶದೊರಕಿದೆ. ಮಹಾಭಾರತದ ಯುದ್ಧದ ರೀತಿಯನ್ನು ತಕ್ಕ ಪ್ರಮಾಣದಲ್ಲಿ ವಿರಾಟಪರ್ವದಲ್ಲಿಯೇ ಕಾಣಬಹುದು. ಈ ವಿಷಯವನ್ನು ಕುರಿತು ಇಲ್ಲಿ ಕೆಲವು ಮಾತುಗಳನ್ನು ಹೇಳಲಾಗಿದೆ.

ವಸ್ತು ಪಾತ್ರ ಮತ್ತು ರಸವ ದೃಷ್ಟಿಯಿಂದ ವಿರಾಟಪರ್ವವನ್ನು ವಿಮರ್ಶಿಸಿದರೆ ಎರಡು ಪ್ರಸಂಗಗಳು ಇಲ್ಲಿ ಎದ್ದು ಕಾಣುತ್ತವೆ. ಇವುಗಳಲ್ಲಿ ಮೊದಲನೆಯದು ವಿರಾಟನ ಹೆಂಡತಿಯಾದ ಸುದೇಷ್ಣೆಯ ತಮ್ಮ ಕೀಚಕ ತನ್ನ ಸ್ಥಾನಬಲದಿಂದ ಪಾಂಡವರ ರಾಣಿಯಾದ ದ್ರೌಪದಿಯನ್ನು ಕೆಣಕಿ ಭೀಮಸೇನನಿಂದ ನಿಪಾತ ಹೊಂದಿದ ಸಂದರ್ಭ. ಎರಡನೆಯದು ಉತ್ತರ ಗೋಗ್ರಹಣದ ಪ್ರಸಂಗದಲ್ಲಿ ವಿರಾಟನ ಕುಮಾರನನ್ನು ಹಾಸ್ಯಾಸ್ಪದನಾದ ವ್ಯಕ್ತಿಯನ್ನಾಗಿ ಮಾಡಿ ಅವನ ಮೂಲಕ ಹಾಸ್ಯದ ಹೊಳೆಯನ್ನೇ ಹರಿಯಿಸಿದ್ದಾನೆ ಕವಿ. ಈ ಮೊದಲ ಸಂದರ್ಭವನ್ನು ಮಾತ್ರ ಇಲ್ಲಿ ಸ್ವಲ್ಪ ವಿವೇಚಿಸಿದೆ.

ಕನ್ನಡ ಮಹಾಭಾರತದ ಪ್ರಧಾನರಸ ವೀರ. ವಿಶ್ವಮೋಹಕವಾದ ಶೃಂಗಾರಕ್ಕೆ ಅಲ್ಲಿ ತಕ್ಕ ಸ್ಥಾನ ದೊರಕಿಲ್ಲ. ತನ್ನ ಭಾರತದ ಹಿರಿಮೆಯನ್ನು ಹೇಳುವ ಸಂದರ್ಭದಲ್ಲಿ ಕವಿ ಕನ್ನಡ ಭಾರತದಲ್ಲಿ ಆ ರಸದ ಸ್ಥಾನ ಏನು ಎಂಬುದನ್ನು ಸೂಚಿಸಿದ್ದಾನೆ. ಸಂಸ್ಕೃತ ಮಹಾಭಾರತವನ್ನು ಸಂಗ್ರಹಿಸುವುದರಲ್ಲಿ ವ್ಯಗ್ರನಾದ ಕವಿ ಅನೇಕ ವೇಳೆ ಇಂತಹ ಸಂದರ್ಭಗಳನ್ನೇ ಸರಿಯಾಗಿ ಉಪಯೋಗಿಸಿಕೊಳ್ಳುವುದಿಲ್ಲ. ಅರ್ಜುನ ಸುಭದ್ರೆ

ಯರ ಪ್ರಣಯ ಪ್ರಸಂಗವೇ ಇದಕ್ಕೆ ಉದಾಹರಣೆ. ದ್ವಾರಕೆ ಯಲ್ಲಿದ್ದ ಬಾಲಕಿಗೆ "ಸನ್ಯಾಸಿ ದೇವರ ಮೇಲೆ ಮನವಾಯ್ತುವರಿ ಗೀಕೆಯ ಮೇಲೆ ನೆಲಸಿತು ಚಿತ್ತ ಕಾಣೆನು ಜಪಸಮಾಧಿಗಳ" ಎಂದು ಎರಡೇ ಮಾತುಗಳಲ್ಲಿ ಅವರಿಬ್ಬರ ಅನುರಾಗದ ಪರ ಮಾವಧಿಯನ್ನು ಸೂಚಿಸುತ್ತಾನೆ. ಆದರೆ ಮಹಾಭಾರತದ ಕಥಾನಾಯಕಿಯಾದ ದ್ರೌಪದಿಯ ಪ್ರಸಂಗ ಬಂದಾಗ ಕವಿ ಆ ಪ್ರಸಂಗಗಳನ್ನು ವಿಸ್ತಾರವಾಗಿ ಬಣ್ಣಿಸುತ್ತಾನೆ. ಆದರೆ ಈ ಸಂದರ್ಭಗಳಲ್ಲಿ ಮಾಧುರ್ಯ ಸೌಕುಮಾರ್ಯಗಳು ಕಂಡು ಬರುವುದಕ್ಕೆ ಪ್ರತಿಯಾಗಿ ದುರಂತದ ಛಾಯೆ ಕವಿದಿರುತ್ತದೆ. ಕೀಚಕನದು ಇಂಥ ಒಂದು ಪ್ರಸಂಗ.

ವಿರಾಟನಗರದಲ್ಲಿ ದ್ರೌಪದಿಯ ಸ್ಥಿತಿ ಬಹಳ ಇಕ್ಕಟ್ಟಿನ ದಾಗಿತ್ತು. ಪಾಂಡವರೊ ಕಾಲಯಮ ಕೆರಳಿದರೆ ಮುರಿವೆಚ್ಚ್ಯಾ ಳುತನವುಳ್ಳವರು ಅಂಥ ಗಂಡಂದಿರು ತನ್ನ ಎದುರಿನಲ್ಲೇ ಇದ್ದರೂ ವಿಪತ್ಕಾಲದಲ್ಲಿ ಮೇಲಿಂದ ಮೇಲೆ ಆಕೆ ಅವರ ರಕ್ಷಣೆ ಯನ್ನು ಕೋರುವ ಹಾಗಿರಲಿಲ್ಲ. ಅವಳ ರೂಪ ಅವಳಿಗೆ ಶತ್ರು ವಾಗಿತ್ತು. ಮೇಲಾಗಿ ಹನ್ನೆರಡು ವರ್ಷಗಳ ವನವಾಸದಿಂದ ಅವಳ ಸೌಂದರ್ಯಕ್ಕೆ ಸಾಣೆ ಹಿಡಿದಂತಿತ್ತು. ಅವಳ ಲೋಕೋತ್ತರವಾದ ಸೌಂದರ್ಯವನ್ನು ಕಂಡು ಕೀಚಕನು ಮೋಹಗೊಂಡುದುದರಲ್ಲಿ ಆಶ್ಚರ್ಯವೇನು? ವಿರಾಟನಗರಿ ಯಲ್ಲಿ ಕೀಚಕನದೇ ಸರ್ವಾಧಿಕಾರ. ಅವನು ಬಲಾಢ್ಯ. ಬಲ ದಲ್ಲಿ ಭೀಮಶಲ್ಯಬಲರಾಮರಿಗೆ ಸಮನಾದವನು. ದೊರೆಯ ಹೆಂಡತಿಯಾದ ಸುದೇಷ್ಣೆಯ ತಮ್ಮ. ಇವನ ಕಣ್ಣಿಗೆ ಬಿದ್ದ ಮೇಲೆ ದ್ರೌಪದಿಯ ಮಾನ ರಕ್ಷಣೆಯಾಗುವ ಸಂಭವವುಂಟೇ?

ಎಂದು ಕೀಚಕನು ಸುದೇಷ್ಣೆಯ ಮೇಳದಬಲೆಯರ ನಡುವಿದ್ದ ದ್ರೌಪದಿಯನ್ನು ನೋಡಿದನೋ ಅಂದೇ ಅವನ ಮನಸ್ಸು ಅವಳಲ್ಲಿ ಗಾಢವಾಗಿ ನಟ್ಟುಹೋಯಿತು. ಕೀಚಕನಲ್ಲಿ ಪರಾಕ್ರಮಕ್ಕೆ ತಕ್ಕ ಸಂಯಮವಿಲ್ಲ. ದ್ರೌಪದಿಯನ್ನು ನೋಡುತ್ತಿದ್ದ ಹಾಗೆಯೇ 'ಕೀಳಲರಿದಾಯ್ತಾಲಿಗಳು ಬಳಿಕ' 'ಸೋತು ಪಾತಕವ ನೆನೆದ' ಅಕ್ಕ ತಮ್ಮನಿಗೆ ಸೈರಂಧ್ರಿಗೆ ಗಂಧರ್ವರ ಕಾವು ಉಂಟೆಂದು ಎಚ್ಚರಿಸಿದಳು. ಅವನು ಇದನ್ನು ಗಮನಿಸಲಿಲ್ಲ. ದ್ರೌಪದಿಯೂ ಕೀಚಕನನ್ನು ಕಂಡು ಬಗೆಬಗೆಯಾಗಿ ಬೋಧಿಸಿದಳು. ಕಾಮಾಂಧನಿಗೆ ಧರ್ಮಶ್ರವಣ ಹಿಡಿಸಿತೇ? ದ್ರೌಪದಿ ತನ್ನನ್ನು ನಿರಾಕರಿಸಿದ ಮೇಲೆ ಅವನು ಅಕ್ಕನನ್ನು ಮರೆಹೊಕ್ಕನು. ಆಕೆ 'ಪರಸತಿ ಮೇಳ ಲೇಸಲ್ಲ' ಎಂದು ಬೋಧಿಸಿ ದ್ರೌಪದಿಯನ್ನು ಅವನ ಬಳಿಗೆ ಕಳುಹಿಸಿದಳು. ಅವಳು ತನ್ನ ಅಭೀಷ್ಟವನ್ನು ಪೂರೈಸದಿದ್ದಾಗ ರಾಜಸಭೆಯಲ್ಲಿ ಅವಳನ್ನು ಒದ್ದನು. ಹೀಗೆ ಮಾಡಿ ಕೆಂಡವನ್ನು ತಲೆಯಲ್ಲಿ ಮುಡಿದುಕೊಂಡನು. ಮಾರನೆಯ ದಿನ ದ್ರೌಪದಿಯ ಮಾತಿನಿಂದ ಆಕೆ ತನ್ನನ್ನು ರಮಿಸಲು ಒಪ್ಪಿದಳೆಂದೇ ಹಿಗ್ಗಿ, ಗರುಡಿಯ ಮನೆಯಲ್ಲಿ ಭೀಮನೊಡನೆ ಹೋರಾಡಿ ಪ್ರಾಣವನ್ನು ನೀಗಿ ತನ್ನ ಅವತಾರವನ್ನು ಮುಗಿಸಿದನು. ಇದು ಕೀಚಕವಿರಹಿಯ ಶೃಂಗಾರ ಚೇಷ್ಟೆ; ಶೃಂಗಾರಾಭಾಸ. ಈ ಪ್ರಸಂಗವನ್ನು ಓದುತ್ತಿರುವಾಗ ನಮ್ಮ ಅನುಕಂಪವೆಲ್ಲ ದ್ರೌಪದಿಯ ಮೇಲೆಯೇ ಹೊರತು ಕೀಚಕನ ಮೇಲೆ ಸ್ವಲ್ಪವೂ ಇರುವುದಿಲ್ಲ. ಅನುಕಂಪದ ಮಾತು ಹಾಗಿರಲಿ; ಕೀಚಕನಿಗಾದ ಗತಿಯನ್ನು ಕಂಡು ಮನಸ್ಸು ಸಮಾಧಾನಗೊಳ್ಳುತ್ತದೆ. ಆದರೆ ಕುಮಾರವ್ಯಾಸನು ಆ ಕಾಮುಕನ ವಿರಹ ತಾಪದುರಿಯನ್ನೂ, ಅವನ

ಪಾಶವಿಕಮನೋಭಾವವನ್ನು ಚೆನ್ನಾಗಿ ಬಿಡಿಸಿ ತೋರಿಸಿದ್ದಾನೆ.

ಈ ಪ್ರಸಂಗದಲ್ಲೆಲ್ಲ ನಮ್ಮ ಅನುಕಂಪೆ, ಸಹಾನುಭೂತಿ ದ್ರೌಪದಿಯ ಮೇಲೆಯೇ; ಕೀಚಕನ ಉಪಟಳದಿಂದ ಆಕೆಗೆ ರಕ್ಷಣೆ ಯಾರಿಂದ? ಸುದೇಷ್ಣೆ ದ್ರೌಪದಿಯ ಗೋಳನ್ನು ಕೇಳಿದರೂ ತಮ್ಮನಿಗೆ ಹೆದರಿ ತೇಲಿಸಿ ಮಾತನಾಡಿದಳು. ರಾಜಸಭೆಯಲ್ಲಿ ಕೀಚಕನು ಆವಳನ್ನು ಒದ್ದರೂ ದೊರೆ ಭಯದಿಂದ ಬಾಯ್ಮುಚ್ಚಿಕೊಂಡು ಸುಮ್ಮನಿದ್ದನು. ಕೀಚಕನನ್ನು ಕೊಲ್ಲೋಣವೆಂದು ಭೀಮನು ಆಲದ ಮರವನ್ನು ನೋಡಿದರೂ ಅಣ್ಣನ ಉಪದೇಶದಿಂದ ಅವನು ಖಿನ್ನನಾಗಿ ಹೊರಟುಹೋಗಬೇಕಾಯಿತು. ಸೂರ್ಯನು ಕೊಟ್ಟ ರಾಕ್ಷಸನಿಂದ ಅಂದಿನ ಅವಳ ಮಾನ ಉಳಿಯಿತು. ಆದರೆ ದಿನದಿನವೂ ಈ ಪ್ರಸಂಗ ಒದಗಿದರೆ ಏನುಗತಿ? ಆದಕಾರಣ ದ್ರೌಪದಿ ತನ್ನ ಗಮನವನ್ನು ಗಂಡಂದಿರ ಕಡೆಗೆ ತಿರುಗಿಸಬೇಕಾಯಿತು. ಆದರೇನು. ಧರ್ಮರಾಜನಿಗೆ ಧರ್ಮದ ಗರಹೊಡೆದಿದೆ. ಅರ್ಜುನನು ಅಣ್ಣನ ಆಜ್ಞೆಯಿಂದ ಭ್ರಮಿತನಾಗಿದ್ದಾನೆ. ಪಾಪ! ನಕುಲ ಸಹದೇವರು ಈ ನಾಯ ಕೊಲಲಶಕ್ತರು. ಆದ್ದರಿಂದ ಎಲ್ಲರೊಳು ಮಿಡುಕುಳ್ಳ ಗಂಡನೆಂದರೆ ಭೀಮನೊಬ್ಬನೇ. ಹಾನಿಹರಿಬಕೆ ನಿಲ್ಲದುಗ್ಗಿಸತಕ್ಕವನು. ಹೀಗೆಂದು ದ್ರೌಪದಿ ವೃಕೋದರನನ್ನು ಮರೆಹೊಕ್ಕಳು.

ಈ ಬಾರಿ ಭೀಮನು ದ್ರೌಪದಿಗೆ ಸುಲಭವಾಗಿ ಒಲಿಯಲಿಲ್ಲ. ಅವನು ದ್ರೌಪದಿಯ ವಿಷಯದಲ್ಲಿ ಸಹಾನುಭೂತಿಯಿಂದ ವರ್ತಿಸಲಿಲ್ಲವೆಂದಲ್ಲ. ಅವನು ದ್ರೌಪದಿಗೆ ಸಹಾಯ

ವೆಸಗಬೇಕೆಂದಾಗಲೆಲ್ಲ, ಅಣ್ಣನ ಆಜ್ಞೆ ಅವನ ಕೈಯನ್ನು ತಡೆಯುತ್ತಿತ್ತು. ದುಶ್ಶಾಸನನನ್ನು ರಾಜಸಭೆಯಲ್ಲಿಯೇ ಧ್ವಂಸ ಮಾಡಬೇಕೆಂದಾಗ ಅಣ್ಣನು ಅದಕ್ಕೆ ಅಡ್ಡಿ ಬಂದನು. ಕೀಚಕ ಕುನ್ನಿಯನ್ನು ಪರಿಭವಿಸಬೇಕೆಂದು ಆಲದ ಮರ ವನ್ನು ನೋಡಿದರೆ, ಧರ್ಮರಾಜನ ಕಣ್ಸನ್ನೆಯಿಂದ ಅವನು ಹಿಂದಿರುಗಿ ಹೋಗಬೇಕಾಯಿತು. ಮೇಲಾಗಿ ಅವಳ ಮಾನ ವನ್ನು ಕಾಪಿಡಲು ತಾನೊಬ್ಬನೇ ಹೊಣೆ ಹೊತ್ತಿರುವನೇ? ಧರ್ಮರಾಜನಲ್ಲಿ, ಪಾರ್ಥನಲ್ಲಿ, ನಕುಲ ಸಹದೇವರಲ್ಲಿ ಪ್ರಾರ್ಥಿ ಸಿಕೊಂಡು ಕೀಚಕನ ತಲೆಯ ಚೆಂಡನಾಡಿಸು ಎಂದು ಕೈಕಟ್ಟಿ ಕೊಂಡು ಕುಳಿತುಬಿಟ್ಟನು. ದ್ರೌಪದಿಯ ಭಾಗಕ್ಕೆ ಇದ್ದ ಒಬ್ಬ ಗಂಡನೂ ವಿಮುಖನಾದನು. ಈಗ ಆಕೆ ಏನು ಮಾಡ ಬೇಕು ? ಗಂಡಂದಿರನ್ನು ಬೈದಳು, ತನ್ನ ದೈವವನ್ನು ನಿಂದಿಸಿ ಕೊಂಡಳು, ಕೌರವನು ಪುಣ್ಯವಂತ ಎಂದಳು. ಭೀಮನು ಯಾವುದಕ್ಕೂ ಪ್ರಸನ್ನನಾಗದಿದ್ದಾಗ ತನ್ನ ಕೊನೆಯ ಅಸ್ತ್ರ ಪ್ರಯೋಗ ಮಾಡಿದಳು. 'ಭೀಮ ತನಗೆ ಸಾವಿನ ನೇಮ ವನ್ನು ಕೊಟ್ಟೆ. ಇನ್ನು ನಿಮ್ಮ ಅಣ್ಣನ ಆಜ್ಞೆಯನ್ನು ಮೀರ ದಂತೆ ನೀನು ವರ್ತಿಸಬಹುದು. ಆದರೆ ಮಾತ್ರ ಕಾಮಿನಿಯ ಕೇಳಿಯಲಿ ನೆನೆವುದು. ನನ್ನ ಉದ್ದಾಮತೆಯನ್ನು ಸ್ಮರಿಸು ವುದು' ಎಂದು ಅವನ ಚರಣದಲ್ಲಿ ಹೊರಳಿದಳು. ಕರುಳನ್ನು ಕೊರೆಯುವ ಈ ಮಾತುಗಳು ಯಾವ ಗಂಡಸಿನ ಹೃದಯ ವನ್ನು ತಾನೆ ಕೊರಗಿಸವು? ಹೀಗಿರುವಲ್ಲಿ ಭೀಮನು ದ್ರೌಪದಿ ಯನ್ನು ಸಂತೈಸಿ ಅವಳ ಕೆಲಸವನ್ನು ಆಗಮಾಡಿಕೊಡುವೆ ನೆಂದು ಹೇಳಿದುದರಲ್ಲಿ ಏನು ಆಶ್ಚರ್ಯ !

ಈ ಸನ್ನಿವೇಶದ ಉದ್ದಕ್ಕೂ ಕವಿ ನಮ್ಮ ಸಹಾನು ಭೂತಿಯನ್ನು ದ್ರೌಪದಿಯ ಕಡೆಗೆ ಸೆಳೆದಿದ್ದಾನೆ. ಇದು ಸಹಜವಾದದ್ದೇ. ಭಾರತದಲ್ಲಿ ತುಂಬ ನವೆದ ವ್ಯಕ್ತಿಯೆಂದರೆ ದ್ರೌಪದಿ. ಅವಳಿಗಾಗಿ ಭಾರತ ಹುಟ್ಟಿದ್ದು. ಅವಳ ಕಷ್ಟ ಕಾರ್ಪಣ್ಯಗಳನ್ನು ನೆನೆದಾಗ ವಾಚಕರ ಸಹಾನುಭೂತಿ ಅವಳ ಕಡೆ ಹರಿಯಬೇಕಾದದ್ದು ಸಹಜವಾದದ್ದೇ. ಎರಡನೆಯ ದಾಗಿ ಕೀಚಕನ ಪಾಶವೀಯ ಕಾಮದ ಪರಾಭವವನ್ನು ನಾವು ಬಯಸುವ ಕಾರಣ ಈ ಸಹಾನುಭೂತಿ ಇಮ್ಮಡಿಸುತ್ತದೆ. ಈ ಸಂದರ್ಭದಲ್ಲಿ ದ್ರೌಪದಿ ಭೀಮನನ್ನು ಕೆರಳಿಸುವುದಕ್ಕಾಗಿ ಉಪ ಯೋಗಿಸುವ ಒಂದೆರಡು ಮಾತುಗಳು ಗಾಂಭೀರ್ಯದ ಎಲ್ಲೆ ಯನ್ನು ಮೀರುವುವಾದರೂ, ದ್ರೌಪದಿಯ ಸಂಕಟವನ್ನೂ ಪರಿ ಸ್ಥಿತಿಯನ್ನೂ ನೆನೆದಾಗ ಅವು ಕ್ಷಮಾರ್ಹವೆನಿಸುತ್ತವೆ.

ಕೊನೆಯ ಮಾತಾಗಿ ಇಷ್ಟನ್ನು ಹೇಳಬಹುದು. ಕುಮಾ ರವ್ಯಾಸನು ವ್ಯಾಸ ಭಾರತವನ್ನು ಹೆಜ್ಜೆಹೆಜ್ಜೆಗೂ ಅನುಸರಿ ಸಿದ್ದರೂ ಅದರಲ್ಲಿ ಬರುವ ಅನೇಕ ಉಪಕಥೆಗಳನ್ನೂ, ಧರ್ಮ ನೀತಿಗಳ ಪ್ರಸಂಗಗಳನ್ನೂ ನಿಸ್ಸಂಕೋಚವಾಗಿ ಬಿಟ್ಟು ಬಿಟ್ಟಿ ದ್ದಾನೆ. ಧೌಮ್ಯರು ಪಾಂಡವರಿಗೆ ಕೊಟ್ಟ ಉಪದೇಶ ಕುಮಾರ ವ್ಯಾಸನಲ್ಲಿಲ್ಲ. ಕುಮಾರವ್ಯಾಸ ಭಾರತದ ಅತ್ಯಂತ ಪ್ರಾಚೀನ ಪ್ರತಿಯಾದ ಕ ಪ್ರತಿಯಲ್ಲಿ ಮಲ್ಲಕಾಳಗವಿಲ್ಲದಿರುವುದು ಗಮ ನಾರ್ಹವಾಗಿದೆ. ಮುದ್ರಿತ ಪ್ರತಿಗಳಲ್ಲಿ ಈ ಭಾಗವನ್ನು ಓದು ತ್ತಲೇ ಚೆಕ್ಕೆ ಎದ್ದಂತೆ ಇದ್ದು ಪ್ರತ್ಯೇಕವಾಗಿ ನಿಂತು ಈ ಬರ ವಣಿಗೆ ಕುಮಾರವ್ಯಾಸನದಲ್ಲ. ಪ್ರಕ್ಷಿಪ್ತವೆಂಬುದನ್ನು ಸಾರು ತ್ತದೆ. ಮೇಲಾಗಿ ಮೂಲ ಭಾರತವನ್ನು ನಾರಣಪ್ಪನು

ಸುಂದರವಾಗಿ ಸಂಗ್ರಹಿಸಿರುವನೆಂದು ಹೆಮ್ಮೆ ಪಟ್ಟುಕೊಳ್ಳ ಬಹುದು. ಉತ್ತರನ ಪ್ರಸಂಗ ಮೂಲಭಾರತಕ್ಕಿಂತ ಹೆಚ್ಚು ಸುಂದರವಾಗಿ ಬಂದಿರುವುದೇ ಇದಕ್ಕೆ ಸಾಕ್ಷಿ. ಕನ್ನಡ ಮಹಾ ಭಾರತ ಶ್ರೀ ಕೃಷ್ಣ ಚರಿತಾಮೃತವಷ್ಟೆ. ಕೃಷ್ಣನ ಮಹಾತ್ಮ್ಯೆ ವನ್ನು ನಮ್ಮ ಗದುಗಿನ ಕವಿ ಹಾಡಿ ಹಾಡಿ ತಣಿಯನು. ಈ ಪರ್ವದಲ್ಲಿ ಕೃಷ್ಣ ಭಕ್ತರಾದ ಪಾಂಡವರು ಅಜ್ಞಾತವಾಸದಲ್ಲಿ ರುವುದರಿಂದ ಕವಿಗೆ ಅವನ ಮಹಿಮೆಯನ್ನು ಹಾಡಲು ಮೂಗು ಬ್ಬಸವುಂಟಾಗಿದೆ. ಆದರೂ ಸಂಧಿಗಳ ಕೊನೆಯಲ್ಲಿ, ನಡು ನಡುವೆ ಸಮಯ ದೊರೆತಾಗ ಕೃಷ್ಣನ ಮಹಿಮೆಯನ್ನು ಕವಿ ಹಾಡದೆ ಇರುವುದಿಲ್ಲ ಅಭಿಮನ್ಯುವಿನ ಮದುವೆಯ ಕಾಲದಲ್ಲಿ ಕವಿಯ ಸಂಯಮದ ಕಟ್ಟೆ ಒಡೆದುಹೋಗಿ, ಕೃಷ್ಣ ಭಕ್ತಿಯ ಪ್ರವಾಹವನ್ನೇ ಹರಿಯಿಸುತ್ತಾನೆ. ಕಾವ್ಯದಲ್ಲಿ ಕಂಡು ಬರುವ ಇತರ ಗುಣಗಳು ಮಿಕ್ಕ ಪರ್ವಗಳಲ್ಲಿ ಕಂಡು ಬರುವ ಕಾರಣ ಅವುಗಳನ್ನು ಕುರಿತು ಪ್ರತ್ಯೇಕವಾಗಿ ಇಲ್ಲಿ ಪ್ರಸ್ತಾಪ ಮಾಡಿಲ್ಲ.

# ಕನ್ನಡ ಮಹಾಭಾರತ

# ವಿರಾಟಪರ್ವ ಸಂಗ್ರಹ

## ೧. ಪೀಠಿಕೆ

ಶ್ರೀವನಿತೆಯರಸನೆ ವಿಮಲ ರಾ
ಜೀವಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರದಾತಾರ।
ರಾವಣಾಸುರಮಥನ ಶ್ರವಣಸು
ಧಾವಿನೂತನಕಥನಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ॥ ೧

ವೀರನಾರಾಯಣನೆ ಕವಿ ಲಿಪಿ
ಕಾರ ಕುವರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮಜನಾರ್ದನರು।
ಚಾರುಕವಿತೆಯ ಬಳಕೆಯಲ್ಲ ವಿ
ಚಾರಿಸುವಡಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ॥ ೨

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ಥಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ।
ಬಣಗುಕವಿಗಳ ಲೆಕ್ಕಿಪನೆ ಸಾ
ಕೆಣಿಸದಿರು ಶುಕರೂಪನಲ್ಲದೆ
ಕುಣಿಸಿ ನಗನೇ ಕವಿಕುಮಾರವ್ಯಾಸನುಳಿದವರ॥ ೩

ಹಲಗೆ ಬಳಪವ ಹಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ।
ಬಳಸಿ ಬರೆಯಲು ಕಂಠಪತ್ರದೊ
ಳುಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ॥ ೪

ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ।
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ॥ ೫

ವೇದಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗಫಲ।
ಮೇದಿನಿಯನೊಲಿದಿತ್ತ ಫಲವ
ಸ್ತ್ರಾದಿ ಕನ್ಯಾದಾನಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ॥ ೬



## ೨. ಅನಿಬರಿಗಾಯ್ತು ನಿರ್ವಾಹ

ಕೇಳು ಜನಮೇಜಯ ಧರಿತ್ರೀ
ಪಾಲ ಮುನಿಜನ ಪರಿಜನಂಗಳ
ಬೀಳುಗೊಟ್ಟನು ಭೂಮಿಪತಿ ಬಲವಂದು ಹುತವಹನ।
ಮೇಲುಶಕುನದ ಚಾರುನಿನದವ
ನಾಲಿಸುತ ಸೋದರರು ಸಹಿತ ವ
ನಾಲಯವ ಹೊಱವಂಟು ಸಾರಿದನೊಂದು ವಟಕುಜವ॥ ೧

ಬಂದು ವಟಕುಜದಡಿಯಲೈವರು
ನಿಂದು ದ್ರೌಪದಿಸಹಿತ ನೆಳಲೊಳ
ಗಂದು ವಿಶ್ರಮಿಸಿದರು ಚಿಂತಿಸಿ ಧರ್ಮನಂದನನು।
ಹಿಂದೆ ಹನ್ನೆರಡಬ್ದ ಸವೆದವು
ಮುಂದಣನುವಿನ ಹದನು ತಮಗಿ
ನ್ನೊಂದಬ್ದವಜ್ಞಾತವುತ್ಕಟವಾಯ್ತಲಾಯೆಂದ॥ ೨

ಬಡಗಲವರದು ಮೂಡಣರಸು
ಗಳೊಡೆಗೆಳೆಯರಾಗಿಹರು ತೆಂಕಣ
ಕಡೆಯವರು ಕಂಡಿಹರು ಕೆಲಬಲದವರು ಕ್ರೋಡೆಯರು।
ಪಡುವಣವರತಿ ಕೃಶರು ನಮಗಿ
ನ್ನಡಗಿರಲು ತೆಱನಾವುದೆಂದೆನೆ
ನುಡಿದನರ್ಜುನದೇವನವನೀಪತಿಗೆ ವಿನಯದಲಿ॥ ೩

ವಳಿತವನು ಹೊಕ್ಕಿಬಿದು ಕೌರವ
ರೊಳಗೆ ಹಗೆಯಾಗಿಹನು ಕೀಚಕ
ಬಲ ವಿರಾಟಂಗವನ ಪುರವಲಿ ಭಯವಿಹೀನವದು।
ಮುಳಿದು ಹೇಳಿಕೆಯಾದ ರವಿಸುತ
ಕಲಿ ತ್ರಿಗರ್ತಾದಿಗಳೆನಿಪ ಮಂ
ಡಳಿಕರನು ಬಗೆಗೊಳ್ಳದಾಳುವನವನು ಪಶ್ಚಿಮವ॥ ೪

ನೃಪತಿ ನಿಶ್ಚೈಸಿದನು ಮತ್ಸ್ಯಾ
ಧಿಪನ ನಗರಿಯೊಳಲ್ಲಿ ಸೈರಿಸಿ
ಕೃಪಣತನದಲಿ ನೂಕಬೇಹುದು ನುಡಿದ ವತ್ಸರವ।
ಗುಪಿತವೆಂತಳವಡುವುದಾಶ್ರಯ
ದಪದೆಸೆಯುನೆಂತಾನುವಿರಿ ನಿ
ಷ್ಕೃಪೆಯೊಳೆಂತಾನೆಂಬೆನೆಂದನು ಧರ್ಮನಂದನನು॥ ೫

ದೇವ ನಿಮ್ಮಯ ಮತವೆ ಮತವೆಮ
ಗಾವ ವೇಷದ ವಿವರ ನಿಮಗದ
ನೀವು ಬೆಸಸುವುದೆಂದು ಭೀಮಾರ್ಜುನರು ಬಿನ್ನೈಸೆ।
ನಾವು ಭೂಸುರವೇಷದಲಿ ಸಂ
ಭಾವಿತರು ಮತ್ತಲ್ಲಿ ಸಂನ್ಯಾ
ಸಾವಲಂಬನ ಕಂಕನೆಂಬಭಿಧಾನ ತನಗೆಂದ॥ ೬

ವಲಲನೆಂಬಭಿಧಾನದಲಿ ನೃಪ
ನಿಳಯವನು ಸಾರುವೆನು ತಾನೆಂ
ದುಲಿಯೆ ಮಾರುತಿ ನುಡಿದ ನಟುವಿಗರ ವೇಷವನು।
ಫಲುಗುಣನು ಹಯಗೋನಿವಾಸ
ಸ್ಥಳ ವಿಳಾಸಿತರೆನಲು ಯಮಳರು
ಲಲನೆ ಬಿನ್ನಹ ಮಾಡಿದಳು ಸೈರಂಧ್ರಿವೇಷವನು॥ ೭

ತುಷ್ಟನಾದನು ನೃಪತಿ ಕೃತಪರಿ
ಶಿಷ್ಟಪಾಲನು ಜಗದೊಳತ್ಯು
ತ್ಕೃಷ್ಟಚರಿತನು ತೆಂಕದೆಸೆಗೆ ಸಹೋದರರು ಸಹಿತ।
ದುಷ್ಟಮೃಗಗಳ ಬೇಂಟೆಯಾಡಿ ವ
ಸಿಷ್ಠಮುನಿಯಾಶ್ರಮದ ಸುಜನರ
ರಿಷ್ಟವನು ಪರಿಹರಿಸುತೈತಂದನು ಸರಾಗದಲಿ॥ ೮

ಬಂದು ಮತ್ಸ್ಯಪುರೋಪಕಂಠದ
ನಂದನದ ಕೆಲಕಡೆಯಲನಿಬರು
ನಿಂದು ನಾಲುಕು ದೆಸೆಯನೀಕ್ಷಿಸುತತುಳಭುಜಬಲರು।
ತಂದ ಚರ್ಮದಲಖಿಳ ಕೈದುವ
ನೊಂದು ಹೆಣನಾಕಾರವಲಿ ಬಿಗಿ
ದೊಂದು ಬನ್ನಿಯ ಮರದ ತುದಿಯಲಿ ಕಟ್ಟಲೇಱಿದರು॥ ೯

ತೆಗೆಯದಿರಿ ನೀವೆಂದು ತುಱುಗಾ
ಹಿಗಳನಂಜಿಸಿ ಧರ್ಮಸುತ ದೃಗು
ಯುಗವ ಮುಚ್ಚಿ ಸುರೇಂದ್ರಯಮವರುಣಾದಿಗಳಿಗೆಱಗಿ।
ವಿಗಡನೀಕಲಿಭೀಮನೀಕ್ಷೈ
ದುಗಳನೀತಂಗೀಯದಿರಿ ಕೈ
ಮುಗಿದು ಬೇಡಿದೆನೆಂದು ಸುರರಿಗೆ ನುಡಿದನವನೀಶ॥ ೧೦

ಈವುದಾ ಬೇಡಿವರೆ ಪಾರ್ಥಂ
ಗೀವುದೀಯಜ್ಞಾತವಾಸದೊ
ಳೀ ವಿಗಡ ಭೀಮಂಗೆ ಕೊಡದಿರಿಯೆನಲು ಖತಿಗೊಂಡು।
ನೀವು ಕುಂತಿಯ ಮಕ್ಕಳಾದಿರಿ
ನಾವು ದುರ್ಯೋಧನನವರೆ
ತಪ್ಪಾವುದಿದಕೆಂದನಿಲಸುತನೌಡೊತ್ತಿ ಗರ್ಜಿಸಿದ॥ ೧೧

ಸುರನಿಕರ ಕಾದಿರಲಿ ಮೋಹಿಣೀ
ಧರಣಿ ಕೊಡೆನೆಂದೆನಲಿ ಶಕ್ರನ
ಪುರಿಗೆ ದಾಳಿಯನಿಟ್ಟು ದಿವಿಜರ ಮೋಹರಿಗಳ ತಿವಿದು।
ಉರುತರಾಸ್ತ್ರವನೊಯ್ವೆನೆಂದ
ಬ್ಬರಿಸಿ ಮಾರುತಿ ನುಡಿಯೆ ತಮ್ಮನ
ಭರದ ಖತಿಯನು ನಿಲಿಸಿ ತೆಗೆವಪ್ಪಿದನು ಭೂಪಾಲ॥ ೧೨

ಹದುಳಪಟ್ಟನು ಭೀಮನನು ನಿ
ರ್ಮದನು ಮತ್ಸ್ಯನಪುರಿಗೆ ಯತಿವೇ
ಷದಲಿ ಬಂದನು ಹೊನ್ನಸಾರಿಯ ಚೀಲ ಕಕ್ಷದಲಿ।
ಇದಿರೊಳಾನತರಾಯ್ತು ಕಂಡವ
ರುದಿತ ತೇಜಃಪುಂಜದಲಿ ಸೊಂ
ಪೊದವಿ ಬರೆ ವಿರಾಟ ಕಾಣಿಸಿಕೊಂಡು ಬೆಸಗೊಂಡ॥ ೧೩

ಇತ್ತ ಬಿಜಯಂಗೈಯಿ ಹಿರಿಯರಿ
ದೆತ್ತಣಿಂದೈತಂದಿರೀಯು
ತ್ಯುತ್ತಮದ ವೇಷದ ಮಹಾತ್ಮರ ಕಂಡು ಬದುಕಿದೆವು।
ಇತ್ತಪೆವು ಬೇಡಿದುದ ನಾವೆನೆ
ಸುತ್ತಬಳಸಿವು ರಾಜಸೇವೆನಿ
ಮಿತ್ತ ಬಂದೆವು ಮುನ್ನಿನೋಲಗವಂತರಿಸಿತಾಗಿ॥ ೧೪

ಕೆಟ್ಟುದಿಂದ್ರಪ್ರಸ್ಥ ಪಾಂಡವ
ರುಟ್ಟು ಹೋದರು ನಾರಸೀರೆಯ
ನಟ್ಟಡವಿ ಮನೆಯಾಯ್ತು ರಾಜಾನ್ವಯದ ರಾಯರಿಗೆ।
ಬಿಟ್ಟರೆಮ್ಮನು ಜಠರ ಭರಣಕೆ
ನೆಟ್ಟನಾಶ್ರಯವಿಲ್ಲದಿರೆ ಕಂ
ಗೆಟ್ಟು ಬಂದೆವು ಕಂಕನೆಂಬಭಿಧಾನ ತನಗೆಂದ॥ ೧೫

ಓಲಗಕೆ ಬಂದಖಿಳರಾಯರ
ಮೌಳಿಮೌಕ್ತಿಕ ಮಣಿಮಯೂಖ ನಿ
ವಾಳಿಯಲಿ ನೆಱೆ ಮೆಱೆವುದಾತನ ಪಾದಪದ್ಮಯುಗ।
ಕಾಲವಾವನನಾವಪರಿಯಲಿ
ಕೀಳು ಮಾಡದು ಧರ್ಮಪುತ್ರನ
ನಾಳುಗೊಂಡನು ಮತ್ಸ್ಯನೆಲೆ ಜನಮೇಜಯಕ್ಷಿತಿಪ॥ ೧೮

ಆದುದೈ ನಿರ್ವಾಹ ಕಂಕಂ
ಗಾದುದಾ ಮತ್ಸ್ಯೇಶನಿಂದ ವಿ
ವಾದವಿಲ್ಲದೆ ಸೇವೆ ನಿಜವಾದಂತಿರಿರುತಿಲು।
ಹೋದುವಿತ್ತಲು ಕೆಲವು ದಿನ ತನ
ಗಾದ ಬಾಣಸವೇಷದಲಿ ರಿಪು
ಭೇದಿಮಾರುತಿ ಬಂದು ಕಂಡನು ಮತ್ಸ್ಯಭೂಪತಿಯ॥ ೧೯

ಏನು ಪರಿಣತಿ ನಿನಗೆ ಬಾಣಿಸಿ
ಯಾನು ಭೀಮನ ಮನೆಯವನು ಮ
ತ್ತೇನು ಭುಜಬಲವಱಿವೆನಗ್ಗದ ಮಲ್ಲವಿದ್ಯೆಯಲಿ।
ನೀನಧಿಕನೆಂದಾ ಸಮೀರನ
ಸೂನುವನು ಮನ್ನಿಸಿದನಿತ್ತಲು
ಮಾನನಿಧಿ ಮಱುದಿವಸ ಹೊಕ್ಕನು ಪಾರ್ಥನಾ ಹೊಳಲ॥ ೨೦

ಸುರಪನರಸಿಯ ಶಾಪದಲಿ ಸಿತ
ತುರಗನರೆವೆಣ್ಣಾಗಿ ಮತ್ಸ್ಯೇ
ಶ್ವರನ ಮಗಳಿಗೆ ನಾಟ್ಯವಿದ್ಯಾಭ್ಯಾಸ ಸಂಗದಲಿ।
ಇರಲು ಯಮಳರು ತುರುಗ ಗೋವ್ರಜ
ವರಣರಾದರು ಬಳಿಕ ಪಾಂಡವ
ರರಸಿ ಸಾರಿವಳೊಲವಿನಲಿ ವೈರಾಟಪಟ್ಟಣವ॥ ೨೧

ಜನದ ಜಾಣಕ್ಕಾಡಲಾ ಮೋ
ಹನ ಮಹೋದಧಿ ಮತ್ಸ್ಯನೃಪನಂ
ಗನೆಯ ನಿಳಯಕೆ ಬರಲು ಬೆಱಗಾಯ್ತಖಿಳನಾರಿಯರು।
ವನಿತೆ ಮಾನವಿಯಲ್ಲ ಮನುಜರಿ
ಗಿನಿತು ರೂಪೆಲ್ಲಿಯದು ವಿಸ್ಮಯ
ವೆನುತ ಮನದೊಳಗಳುಕಿದರು ಮತ್ಸ್ಯೇಶನರಸಿಯರು॥ ೨೦

ಬರವ ಕಂಡು ಸುದೇಷ್ಣೆ ಮನದಲಿ
ಖರುಷ ಮಿಗೆ ಹೊಂಗಿದಳು ಕರೆ ಕರೆ
ತರುಣಿಯಾರೆಂದಟ್ಟಿದಳು ಕೆಳದಿಯರನನಿಬರನು।
ಸರಸಿಜಾಯತಗಂಧವನು ಮೋ
ಹರಿಸಿ ಮುಂಚುವ ಪರಿಮಳವನಂ
ದರಸಿ ಬೀಱುತ ಬಂದು ಹೊಕ್ಕಳು ರಾಜಮಂದಿರವ॥ ೨೧

ಕೆಳದಿಯರು ಕಾಣಿಸಿದರಸನ
ಲಲನೆಯನು ಪರಿಯಂಕ ಪೀಠದ
ಕೆಲಕೆ ಕರೆದಳು ಕಮಲವದನೆಯನುಚಿತವಚನದಲಿ ।
ನಳಿನಮುಖಿ ನೀನಾರು ನಿನಗಾ
ರೊಳರು ರಮಣರು ಮಾಸಿಕೊಂಡಿಹ
ಮಲಿನವೃತ್ತಿಯಿದೇಕೆನುತ ಬೆಸಗೊಂಡಳಂಗನೆಯ॥ ೨೨

ಅತುಳಬಲ ಗಂಧರ್ವರೈವರು
ಪತಿಗಳೆನಗುಂಟೆನ್ನ ಚಿತ್ತಕೆ
ಖತಿಯ ಮಾಡಿದಡೊಂದು ವರುಷಕೆ ಬಿಡುವೆನವರುಗಳ।
ಸತತವಾ ಕುಂತೀಕುಮಾರರ
ಸತಿಯನೋಲೈಸಿದ್ದೆ ಬಳಿಕವ
ಧೃತಿಗಹನದಲಿ ನಿಷ್ಠುರಾಗಲು ತನಗೆ ಬರವಾಯ್ತು॥ ೨೩

ಎನಲು ಮೆಚ್ಚಿದಳಾ ವಿರಾಟನ
ವನಿತೆ ವೀರರ ವಧುವನಾ ಸಖಿ
ಜನದೊಳಗೆ ಮನ್ನಿಸಿದಳನಿಬರಿಗಾಯ್ತು ನಿರ್ವಾಹ।
ಮನದ ದಗೆಯಡಗಿದುದು ಮತ್ಸ್ಯೇ
ಶನ ಪುರಾಂತರದೊಳಗೆ ವೈಗಜಿ
ದನುಪಮೋನ್ನತಸತ್ವರಿದ್ದರು ಭೂಪ ಕೇಳೆಂದ॥ ೨೬

## ೩. ಕೀಚಕರಾಯ ವಂಶಾರಣ್ಯವನು ಸವರಿದನು

ಒಂದು ದಿವಸ ವಿರಾಟನರಸಿಯು
ಮಂದಿರವನೋಲೈಸಲೆಂದೈ
ತಂದನಾಕೆಯ ತಮ್ಮ ಕೀಚಕನತುಳಭುಜಬಲನು ।
ಹಿಂದೆ ಮುಂದಿಕ್ಕೆಲದ ಸತಿಯರ
ಸಂದಣಿಯ ಮಧ್ಯದಲಿ ಮೆಱೆವರ
ವಿಂದವದನೆಯ ಕಂಡು ಕಾಣಿಕೆಯಿತ್ತು ಪೊಡಮಟ್ಟ॥ ೧

ಅನುಜನನು ತೆಗೆದಪ್ಪಿ ಸಿಂಹಾ
ಸನದ ಕೆಲದೊಳಗಿರಿಸಿ ಮುದದಲಿ
ಮನದಣಿಯೆ ಮನ್ನಿಸಿದಳಂಗನೆ ನಿಜಸಹೋದರನ।
ತನುಪುಳಕ ತಲೆದೋಱಲವನು
ಬ್ಬಿನಲಿ ಸತ್ಕೃತನಾಗಿ ಕಮಲಾ
ನನೆಯರನು ಕಂಡನು ಸುದೇಷ್ಣೆಯ ಮೇಳದಬಲೆಯರ॥ ೨

ಅವರ ಮಧ್ಯದೊಳಮಲತಾರಾ
ನಿವಹದಲಿ ರೋಹಿಣಿಯವೊಲು ಸುರ
ಯುವತಿಯರೊಳೂರ್ವಸಿಯವೊಲು ನದಿಗಳಲಿ ಜಾಹ್ನವಿಯ ।
ಅವಯುವದ ಪರಿಮಳದ ಪಸರಕೆ
ಕವಿವ ತುಂಬಿಯ ಸಾರಸಂಗೀ
ತವನು ಕೇಳುತ ಕಂಡನವ ಪಾಂಚಾಲನಂದನೆಯ॥ ೩

ಮೊದಲಲವನವಳಂಗವಟ್ಟವ
ನೊದವಿ ನೋಡಿದಡಲ್ಲಿಯೇ ಗಾ
ಢದಲಿ ನಟ್ಟವು ಕೀಳಲರಿದಾಯ್ತಾಲಿಗಳನಲುಗಿ।
ಮದನ ಮಸೆದೋಱಿದನು ಹೊಗಣೆ
ಹೃದಯವನು ತಾಗಿದುದು ಹರ ಹರ
ಹೆದಱಿದನು ಹಮ್ಮೈಸಿದನು ಖಳನೊಂದು ನಿಮಿಷದಲಿ॥ ೪

ಜಗವ ಕೆಡಹಲು ಜಲಜಸಂಭವ
ಬಿಗಿದ ಬಲೆ ಇವಳಲ್ಲಲೇ ಮೂ
ಜಗದ ಯತಿಗಳನೆಸಲು ಮಸೆದಲಗಲ್ಲಲೇಯೆನುತ।
ವಿಗಡನಾದನು ಮದನನಂಬುಗ
ಳುಗಿದವೆದೆಯಲಿ ನಟ್ಟದೃಷ್ಟಿಯ
ತೆಗೆಯಲಱಿಯದೆ ಸೋತು ಕೀಚಕ ಪಾತಕವ ನೆನೆದ॥ ೫

ಬೀಳುಗೊಂಡುದು ಲಜ್ಜೆ ಮಹಿಮೆಯ
ಕೀಲು ಕಳಚಿತು ದ್ರುಪದತನುಜೆಯ
ನಾಲಿಯೊಳು ನುಂಗಿದನು ಮನದಲಿ ಸತಿಯ ಸೆಱಿಗೈದು।
ಕೇಳು ಬಿನ್ನಹವಕ್ಕ ನಿಮ್ಮಡಿ
ಯೋಲೆಕಾತಿಯರೊಳಗೆ ವಿಾಟನ
ಮೇಲುಗೈಯಿವಳಾವಳೆಂದಗ್ರಜೆಯ ಬೆಸಗೊಂಡ॥ ೬

ಈಕೆ ಗಂಧರ್ವರ ರಮಣಿ ನ
ಮ್ಮಾಕೆಯಾಗಿಯೆ ಮಾನ್ಯವೃತ್ತಿಯೊ
ಳೀಕೆಯನು ಸಲಹುವೆವು ಬಲ್ಲಿದರಿವಳ ವಲ್ಲಭರು।
ಸಾಕು ಬೀಡಾರಕ್ಕೆ ನೀ ಹೋ
(ಗೀಕೆ ನಿನಗಹಳಲ್ಲ)ನಿಂದಿರು
ಕಾಕನಾಡದಿರೆನುತ ಬೀಳ್ಕೊಟ್ಟಳು ನಿಜಾನುಜನ॥ ೭

ತಾಱಿತಂತಃಕರಣ ಕಾಮನ
ಕೂಱುಗಣೆಗೀಡಾಯ್ತು ವೈ ಮನ
ದೇಱುಮುಚ್ಚದು ದುಗುಡ ಬಲಿದುದು ಮುಸುಕು ಮೋಱೆಯಲಿ
ವಿಾಱಿ ನಿಜಮಂದಿರಕೆ ಥಗೆ ವೈ
ದೋಱಿ ಬಂದನು ಮಱುದಿವಸ ತಲೆ
ದೋಱಿ ಕಂಡನು ದ್ರೌಪದಿಯನರಮನೆಯ ಬಾಗಿಲಲಿ॥ ೮

ಕಳುಹಿದನು ತನ್ನೊಡನೆ ಬಹ ಗಾ
ವಳಿಯ ಪರಿವಾರವನು ತನ್ನಯ
ಬಳಿಯ ಹಡಪದ ಬಾಲಕನ ಹಿಂದಿಕ್ಕಿ ನಡೆತಂದು।
ಒಲಿದು ಸಿಂಹದ ಸತಿಗೆ ನರಿ ಮನ
ವಳುಪುವಂತಿರೆ ಗರುಡನರಸಿಗೆ
ನಲಿದು ಫಣಿಬಯಸುವವೊಲವನೈದಿದನು ಬಾಲಕಿಯ॥ ೯

ನಿಲ್ಲೆಲಗೆ ಸೈರಂಧ್ರಿ ಕಾಮನ
ಬಲ್ಲೆಹದ ಬಲುಗಾಯ ತಾಗಿತು
ಬಲ್ಲೆ ನೀನವುಷಧಿಯ ಬದುಕಿಸಿಕೊಳ್ಳು ತನ್ನೊಡಲ।
ಮೆಲ್ಲನಡಿಯಿಡು ಮಾತ ಮನ್ನಿಸಿ
ಚೆಲ್ಲೆಗಂಗಳನೆನ್ನಮುಖದಲಿ
ಚೆಲ್ಲಿ ಸಪ್ರಾಣಿಸಲು ಬೇಹುದು ವಿಗತಜೀವನವ॥ ೧೦

ಎಲೆ ದುರಾತ್ಮ ಮಹಾಪರಾಧವ
ಬಳಸುವರೆ ಬಯಲಿಂಗೆ ನಿನ್ನಯ
ಕುಲದ ಬೇಱನು ಕೊಯ್ವರೇ ಬಹುದಾವುದಿದಱಿಂದ।
ಹಳಿವು ಹೊದ್ದದೆ ಹೆತ್ತವರು ಮ
ಕ್ಕಳುಗಳೆಂಬೀ ಬದುಕುಮಾಣದೆ
ಯೆಳೆಸಿಕೊಂಬಂತಾದುದೆಂದಳು ಪಾಂಡವರ ರಾಣಿ॥ ೧೧

ಎಲಗೆ ಪಾತಕಿ ನಿನ್ನ ಕಣ್ಣಿಂ
ಬಲಗಿನಲಿ ಎನ್ನೆದೆಯ ನೋಯಿಸಿ
ತೊಲಗಬಹುದೇ ಕರುಣವಿಲ್ಲವೆ ನಿನ್ನ ಮನದೊಳಗೆ।
ಒಲಿದು ಬಂದೆನು(ಕಾಮನೂಳಿಗ
ಬಲುಹು) ವೈರಿಯು ಭಯುವ ತಗ್ಗಿಸಿ
ತಲೆಯ ಕಾಯಲು ಬೇಹುದೆಂದನು ನಗುತ ಕೀಚಕನು॥ ೧೨

ಕಾತರಿಸದಿರು ಮಂದಿವಾಳದ
ಮಾತುಗಳು ಬೇಡಕಟ ಕೆಡದಿರು
ಸೋತರೇನದು ಮನುಜಧರ್ಮವು ಚಿತ್ತ ಚಂಚಲವು)
ಈತತುಕ್ಷಣ ಜಾರು ಕೇಳಿದ
ಡಾತುಗಳು ಸೈರಿಸರು ದೇವ
ವ್ರಾತದಲಿ ಬಲ್ಲಿದರು ತನ್ನವರೆಂದಳಿಂದುಮುಖಿ॥ ೧೩

ದ್ರೌಪದಿಗೆ ಖಳನುಡಿದನೆನ್ನಾ
ಟೋಪವನು ನೀನರಿಯೆ ಬಡವರ
ಕೋಪವೌಡಿಗೆ ಮೃತ್ಯು ನಿನ್ನವರೇನ ಮಾಡುವರು।
ಆಪೆನವರಂತಿರಲಿ ನೀನೆನ
ಗೋಪಾಳಾದರೆ ಸಾಕು ಮಲೆತಡೆ
ಯಾಪಿನಾಕಿಗೆ ತೆರಳುವೆನೆ ಬಳಿಕಲ್ಲಿ ನೋಡೆಂದ॥ ೧೪

ಸಾವು ತಪ್ಪದು ತನಗೆ ಕಾಮನ
ಡಾವರವು ಘನ ನಿನ್ನ ನೆರೆದೇ
ಸಾವೆನಲ್ಲದೆ ಮದನನಂಬಿಗೆ ಒಡಲನೊಪ್ಪಿಸೆನು।
ಭಾವೆ ನೂಕಲು ಬೇಡಕಟ ರಾ
ಜೀವಮುಖಿ ಕೃಪೆಮಾಡು ತನ್ನಯ
ಜೀವವನು ಉಳುಹೆನುತ ಖಳ ನಸನಗುತ ಕೈಮುಗಿದ॥ ೧೫

ಕುಲದಲೊಬ್ಬನು ಜನಿಸಿ ವಂಶವ
ಹಣಿದವಾಡಿದನೆಂಬ ದುರ್ಯಶ
ವುಳಿವುದಲ್ಲದೆ ಲೇಸಕಾಣೆನು ಬೇಱೆ ಮಾತೇನು।
ಕೊಲೆಗೆಡಿಕಿಯೋ ಪಾಪಿಹೆಂಗಸು
ಹಲಬರನು ಹೊಯಿಸಿದಳು ಸುಡಲೆಂ
ದಳಲವರು ನಿನ್ನಖಿಳರಾಣಿಯರೆಂದಳಿಂದುಮುಖಿ॥ ೧೬

ನೀಱೆ ನೂಕದಿರೆನ್ನ ಮನ ನೆಱೆ
ಮಾಱುವೋದುದು ನೀನುಚಿತ್ತವ
ಸೂಱೆಗೊಂಡಿನ್ನೇಕೆ ಕೊರಲಿಂಗಲಗ ಹೂಣಿಸುವೆ।
ಜಾಱದಿರು ಎನ್ನೆದೆಗೆ ತಾಪವ
ಬೀಱದಿರು ಕಾರುಣ್ಯವನು ಕೈ
ದೋಱೆನಗೆ ಕಮಲಾಕ್ಷಿ ಮರಣವ ಮಾಣಿಸೆನಗೆಂದ॥ ೧೭

ನ್ಯಾಯವನು ಮಿಗೆಗೆಲುವುದೀಯ
ನ್ಯಾಯವಧಿಕವು ಧರ್ಮಪರರೇ
ಸ್ಥಾಯಿಗಳು ತಿಮಿರಕೆ ಭಾಸ್ಕರಗಾವುದಂತರವು।
ಕಾಯರೆನ್ನವರವರ ಕೈಗುಣ
ದಾಯತವ ಬಲ್ಲವರೆ ಬಲ್ಲರು
ನಾಯಿ ಸಿಂಹಕ್ಕಿದಿರೆ ಫಡ ಹೋಗೆಂದಳಿಂದುಮುಖಿ॥ ೧೮

ಹೂಣೆ ಹೊಕ್ಕುದು ವಿರಹವಾಸೆಯ
ಕಾಣೆನಾಕೆಯ ಮಾತಿನಲಿ ಮುಂ
ಗಾಣಿಕೆಯುಲೇ ಸೂಱೆಯೋದುದು ಮನದ ಸರ್ವಸ್ವ।
ತ್ರಾಣ ಸಡಿಲಿತು ಬುದ್ಧಿ ಕದಡಿ ಕೃ
ಪಾಣ ಪಾಣಿ ವಿರಾಟರಾಯನ
ರಾಣಿಯುರಮನೆಗೈದಿದನು ಕಂಡನು ನಿಜಾಗ್ರಜೆಯ॥ ೧೯

ಹಣೆಯನಂಘ್ರಿಗೆ ಚಾಚಲೆತ್ತಿದ
ಕಣಕಿಗನ ತೆಗೆದಪ್ಪಿ ಮದವಾ
ರಣನೆ ಕುಳ್ಳಿರೆನುತ್ತ ನೋಡಿದಳಾ ಸಹೋದರನ।
ಹೆಣಮುಸುಡು ಬಿದ್ದಿದೆ ಲತಾಂಗಿಯು
ಕೆಣಕಿದನು ಕಡುಪಾಪಿ ವಂಶವ
ಹಣಿದವಾಡದೆ ಮಾಣನೇಗುವೆನೆನುತ ಮರುಗಿದಳು॥ ೨೦

ಅಳಿದುದಗ್ಗದ ಮಹಿಮೆ ಮುಸುಡಿನ
ಬೆಳಕು ಕಂದಿತು ಬಹಳಚಿಂತಾ
ಜಲಧಿಯೊಳಗದ್ದಂತೆ ಸೊಂಪಡಗಿತು ನಿಜಾಕಾರ।
ಕುಲಶಿರೋಮಣಿ ಪೇಳು ಚಿತ್ತದ
ನೆಲೆಯನೆನೆ ನಸುನಾಚಿ ಮದನನ
ಹಿಳುಕು ಸುಮತಿಯು ಸೀಳೆ ಬಳಿಕಿಂತೆಂದನವ ನಗುತ॥ ೨೧

ಬೇಱೆ ಬಿನ್ನಹವೇನು ಸತಿಯರ
ನೂಱುಮಡಿ ಚೆಲುವಿನಲಿ ಚಿತ್ತವ
ಸೂಱೆಗೊಂಡವಳಿಹಳು ನಿನ್ನೋಲಗದ ಸತಿಯರಲಿ।
ಮಾಱಿದಳು ಮದನಂಗೆ ಜೀವಿಸ
ಲಾಱೆನಾಕೆಯನೊಳಗುಮಾಡಿಸಿ
ತೋಱಿದರೆ ತನ್ನೊಡಲೊಳಸುವಿಂಗಿಹುದು ನಿರ್ವಾಹ ೨೨

ಅವಳಗಂಡರು ಸುರರು ಸುರರಿಗೆ
ನವಗದಾವಂತರವು ಮುನಿದರೆ
ದಿವಿಜ ಬಲಕಿದಿರುಂಟೆ ನಮ್ಮನದಾರು ಕಾವವರು।
ಅವಳ ತೊಡಕೇ ಬೇಡ ಸತಿಯರ
ನಿವಹದಲಿ ನೀನಾರ ಬಯಸಿದ
ಶವಳ ನಾ ಮುಂದಿಟ್ಟು ಮದುವೆಯನೊಲಿದು ಮಾಡುವೆನು॥ ೨೩

ಅಕ್ಕ ಮರುಳೌ ಚಿತ್ತವವಳಲಿ
ಸಿಕ್ಕಿ ಬೇವರ್ತಿಯಿತ್ತು(ಬಱಿದೇ
ಮಿಕ್ಕ ಡಿಂಬಕೆ ಮದುವೆಯುಂಟೇ ಮನವ ಬೇಱಿರಿಸಿ)
ಮಕ್ಕಳಾಟಿಕೆಯಾದರಾಗಲಿ
ತಕ್ಕರಲ್ಲೆಂದೆನಲಿ ಸಲಹುವ
ಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ॥ ೨೪

ಸೊಗಸವಿತರರ ಮಾತು ಕಣ್ಣಿಗ
ಳೊಗಡಿಸವು ಮಿಕ್ಕವರ ರೂಹನು
ಹಗೆಗಳಾಗಿಹುವುಳಿದವರ ನಾಮಗಳು ನಾಲಗೆಗೆ।
ಸೆಗಳಿಕೆಯ ಶಶಿಯಾದೆನ್ನೆನ್ನಯ
ಬಗೆಯ ಸಲಿಸೌ ಹರಿದ ಕರುಳಿನ
ಮೃಗದ ಮಱಿಯನು ಕಾಯಬೇಕೆಂದೆಱಗಿದನು ಪದಕೆ॥ ೨೫

ಆಲಿ ನೀರೇಱಿದವು ತಮ್ಮನ
ಮೇಲೆ ತಳಿತುದು ಮೋಹ ಕಾಲನ
ಪಾಳಯಕೆ ಕೈಗೊಟ್ಟಳಂಗನೆ ನೆಗಹಿದಳು ಖಳನ।
ಏಳು ಭವನಕೆ ಹೋಗು ತರುಣಿಯು
ನಾಳೆ ನಾ ಕಳುಹುವೆನು ಪರಸತಿ
ಮೇಳ ಲೇಸಲ್ಲೆನುತ ಕಳುಹಿದಳಬಲೆ ಕೀಚಕನ॥ ೨೬

ಮನದೊಳಗೆ ಗುಡಿಗಟ್ಟಿದನು ಮಾ
ನಿನಿಯ ಕರುಣಾಪಾಂಗರಸಭಾ
ಜನವು ಪುಣ್ಯವಲಾ ಎನುತ ಬೀಳ್ಕೊಂಡನಗ್ರಜೆಯ।
ಮನದೊಳೊದವಿದ ಮರಳುತನದು
ಬ್ಬಿನಲಿ ಹೊಕ್ಕನು ಮನೆಯನಿತ್ತಲು
ದಿನಕರಂಗಾಯ್ತಸ್ತಮಯವಸ್ತಾಚಲಾದ್ರಿಯಲಿ॥ ೨೭

ಸಲೆ ದಿಗಂಗನೆಯಿಟ್ಟ ಚಂದನ
ತಿಲಕವೋ ಮನುಮಥನ ರಾಣಿಯ
ಚೆಲುವಗೈಗನ್ನಡಿಯೊ ಮದನನ ಬಿರುದಿನೊಡ್ಡಣವೊ।
ತಳಿತ ವಿರಹಿಯ ಸುಡುವ ಕೆಂಡದ
ಹೊಳಹೊ ಬೆಸಗೊಳಲೇನು ರಜನೀ
ವಳಯದಲಿ ಶಶಿಯುದಯವಾದನು ಜಗವನುಜ್ವಳಿಸಿ॥ ೨೮

ಖಳನ ವಿರಹದ ತಾಪದುರಿ ವೆ
ಗ್ಗಳಿಸೆ ತನ್ನರಮನೆಗೆ ಬಂದನು
ಕಳವಳಿಗ ಹಾ ಎನುತ ಕೆಡೆದನು ತಳಿರ ಹಾಸಿನಲಿ।
ನಳಿನವೈರಿಯ ಸುಳಿವು ತನ್ನಯ
ಕೊಲೆಗೆ ಬಂದುದು ಪಾಪಿ ಕಮಲಜ
ಚಲವಿಲೋಚನೆಗೇಕೆ ಮಾಡಿದನಿನಿತು ಚೆಲುವಿಕೆಯ॥ ೨೯

ಅರೆಘಳಿಗೆ ಯುಗವಾಗಿ ನೂಕಿದ
ನಿರುಳನುದಯಾಚಲದ ಶಿರದಲಿ
ತರಣಿ ತಲೆದೋಱಿದನು ತೊಡೆದನು ಭುವನದಂಧತೆಯ।
ಪರಿಮಳದ ಪಾವುಡದಿನಳಿಗಳ
ಕರಸಿದವು ತಾವರೆಗಳಿಗೆ ಕಾ
ತರಲತಾಂಗಿಯ ಸುಯ್ಲು ತಾಗಿತು ಕುಮುದಿನೀಪತಿಗೆ॥ ೩೦

ಬಯಸಿದಳು ವೃತ್ಯುವನು ಕಡುಪಾ
ಪಿಯ ಮನೋಧರ್ಮವನು ಜನಮೇ
ಜಯಮಹೀಪತಿ ಕೇಳು ಪಾಂಚಾಲಿಯನು ಕರಸಿದಳು।
ನಯನವಿಹೀನೆ ಸುದೇಷ್ಣೆ ಬಂದಾ
ಕೆಯನು ಬೆಸಸಿದಳೆಲಗೆ ಅನುಜಾ
ಲಯದೊಳುತ್ತಮಮಧುವ ನೀ ಝಡಿತೆಯಲಿ ತಹುದೆಂದು॥ ೩೧

ಅಮ್ಮೆನಲ್ಲಿಗೆ ದೇವಿ ನಿಮ್ಮಯ
ತಮ್ಮ ದುರುಳನು ಲೇಸು ಹೊಲ್ಲಹ
ವೆಮ್ಮ ತಾಗುವುದಾತನಳಿದರೆ ಬಳಿಕ ಹಳಿವೆಮಗೆ।
ನಿಮ್ಮನಾವೋಲೈಸಿ ನಿಮಗೆ ವಿ
ಕರ್ಮವನು ಮಾಡುವುದು ನಮಗದು
ಧರ್ಮವಲ್ಲುಳಿದವರ ಕಳುಹುವುದೆಂದಳಿಂದುಮುಖಿ॥ ೩೨

ಎನಲು ಭುಗಿಲೆಂದಳು ಸುದೇಷ್ಣೆ ತಕೆ
ಮನದ ಗರ್ವವ ನುಡಿವೆ ನಿನ್ನಿಂ
ದೆನಗೆ ಮೋಹೆನ್ನವರಿಗುಂಟೇ ಹಾನಿಹಳಿವುಗಳು।
ಅನುಜನಾರೆಂದಱಿಯೆ ಸಾಕಾ
ತನ ಸಮೀಪಕೆ ಹೋಗಿ ಬಾ ನಡೆ
ಯೆನಲು ಕೈಕೊಂಡಬಲೆ ಹೊಱವಂಟಳು ನೃಪಾಲಯವ॥ ೩೩

ಮನುಮಥನ ಮದದಾನೆ ಕಂದ
ರ್ಪನ ಮಹಾಮಂತ್ರಾಧಿ ದೇವತೆ
ಜನರು ಮರುಳಹ ಮದ್ದು ಸಂಸೃತಿಸುಖದ ಸಾಕಾರೆ।
ಮನಸಿಜನ ಮಸೆದಲಗು ಜನಮೋ
ಹನತಿಲಕ ಲಾವಣ್ಯಸಾಗರ
ಜನಿತ ಲಕ್ಷ್ಮಿಲತಾಂಗಿ ಬಂದಳು ಕೀಚಕನ ಮನೆಗೆ॥ ೩೪

ಕುಡಿತೆಗಂಗಳ ಚಪಳೆ ಉಂಗುರ
ವಿಡಿಯನಡುವಿನ ನೀಱೆ ಹಂಸೆಯ
ನಡೆಯ ನಲವಿನ ಮೌಳಿಕಾತಿ ಪಯೋಜಪರಿಮಳದ।
ಕಡುಗುರುವೆ ಬರಲವನು ತನು ನಡು
ನಡುಗಿ ನಿಂದನದಾವ ಹೆಂಗುಸು
ಪಡೆದಳೀ ಚಲುವಿಕೆಯನೆನುತಡಿಗಡಿಗೆ ಬೆಱಗಾದ॥ ೩೫

ಆವ ಜನ್ಮದ ಸುಕೃತಫಲ ನೆರೆ
ದೀವಧುವ ಸೇರಿದರೊ ಧನ್ಯರು
ತಾವಲಾ ಬಳಿಕೇನು ಪೂರ್ವದ ಸುಕೃತಸರ್ವಸ್ವ।
ಭಾವಿಸಲು ಸುವ್ರತದ ಫಲದಿಂ
ದೀವನಿತೆಯಲ್ಲಿಂದ ಮೇಲಿ
ನ್ನಾವುದತಿಶಯವೆಂದೆನುತ ಖಳರಾಯನಿದಿರೆದ್ದ॥ ೩೬

ತರುಣಿ ಬಾ ಕುಳ್ಳಿರು ಮದಂತಃ
ಕರಣದೆಡರಡಗಿತ್ತು ಕಾಮನ
ದುರುಳುತನಕಾನಂಜುವೆನೆ ನೀನೆನಗೆ ಬಲವಾಗೆ।
ಬಿರುದ ಕಟ್ಟುವೆನಿಂದುವಿಗೆ ಮಧು
ಕರಗೆ ಕೋಗಿಲೆಗೆಂದು ಖಳನು
ಬ್ಬರಿಸಿ ನುಡಿಯಲು ಖಾತಿಗೊಂಡಿಂತೆಂದಳಿಂದುಮುಖಿ॥ ೩೭

ಬಾಯಿ ಹುಳುವುದು ಬಯಲು ನುಡಿವರೆ
ನಾಯಿತನ ಬೇಡೆಲವೊ ಕೀಚಕ
ರಾಯನಂಗನೆ ಕಳುಹೆ ಬಂದೆನು ಮಧುವ ತರಲೆಂದು।
ನಾಯಬೇಕೇ ಬಸಿದ ಶೂಲವ
ಹಾಯಿ ಹೋಗನೆ ನಿನ್ನ ಪೈಗಳು
ನೋಯಿಸುವುವೇ ತನ್ನನೆನುತವೆ ತುಡುಕಿದನು ಸತಿಯ॥ ೩೮

ಕರವನೊಡೆ ಮುಗುಚಿದಳು ಬಟ್ಟಲ
ಧರೆಯೊಳೀಡಾಡಿದಳು ಸತಿ ಮೊಗ
ದಿರುಹಿ ಬಾಗಿಲ ದಾಂಟಿ ಭಯದಲಿ ನಡುಗಿ ಡೆಂಡೆಣಿಸಿ।
ತರಳೆ ಹಾಯ್ದಳು ಮೊಲೆಯ ಜಘನದ
ಭರದಿ ಬಡನಡು ಮುಱಿಯದಿಹುದೇ
ವರಸಭಾಗ್ಯತೆಗೆನಲು ರಭಸದೊಳೋಡಿದಳು ಸಭೆಗೆ॥ ೩೯

ಒಡನೆ ಬೆಂಬತ್ತಿದನು ತುಱುಬನು
ಹಿಡಿದು ತೊತ್ತಿನ ಮಗಳೆ ಹಾಯ್ದಡೆ
ಬಿಡುವೆನೇ ತಾನೆನುತ ಹೊಯ್ದನು ಕಾಲೊಳೊಡೆಮೆಟ್ಟಿ ।
ಕೆಡೆದು ರಕುತವ ಕಾಱಿ ಹುಡಿಯುಲಿ
ಮುಡಿಹೊರಳೆ ಬಿಱುಗಾಳಿಯುಲಿ ಸೈ
ಗೆಡದ ಕದಳಿಯ ಕಂಭದಂತಿರೆ ಕಾಂತೆ ಹೊರಳಿದಳು॥ ೪೦

ಶಿವ ಶಿವಾ ಪಾಪಿಗಳು ಪತಿಯಾ
ದವರ ತಾಗಲಿ ಸುಯ್ಲು ಕಟ(ನಾ
ಲುವರ ನಡುವಣ ಹಾವು ಸಾಯದು) ನಿರಪರಾಧಿಯನು ।
ಅವಗಡಿಸಿದನು ಖಳನು ಧರ್ಮದ
ವಿವರ ಶುದ್ಧಿಯನಾಡದೀ ಜನ
ನಿವಹ ಘೋರಾರಣ್ಯವಾಯ್ತೆನುತೊಱಲಿದಳು ತರಳೆ॥ ೪೧

ನೊಂದಳಕಟಾ ಸತಿಯೆನುತ ಮನ
ನೊಂದು ಮೋಱೆಯ ಬಿಗಿದು ಖತಿಯುಲಿ
ಕಂದಿ ನಸುವೈಮುರಿದು ರೋಷದಲೌಡನೊಡೆಯೊತ್ತಿ।
ಮುಂದಿಯಱಿಯದವೊಲ್ ಕುಚೇಷ್ಟೆಯ
ನೊಂದಿ ಮೆಲ್ಲನೆ ಬಾಗಿ ನೋಡಿದ
ನಂದು ರಾಜಾಲಯದ ಮುಂದಣ ಮರನನಾ ಭೀಮ॥ ೪೨

ಈತನಿಂಗಿತದನುವನಱಿದು ಮ
ಹೀತಳಾಧಿಪ ಧರ್ಮಸುತನತಿ
ಕಾತರಿಸದಿರು ವಲಲ ಸೈರಿಸು ಸೈರಿಸಕಟೆನುತ ।
ಈ ತರುವ ಮುಱಿಯದಿರು ಸುಜನ
ವ್ರಾತಕಾಶ್ರಯ ಊರ ಹೊಱಗೆ ಮ
ಹಾತಿಶಯತರುವುಂಟು ನಿನ್ನಯ ಬಾಣಸಿನ ಮನೆಗೆ॥ ೪೩

ಧರ್ಮವುಯುತರುವಿದನು ಮುಱಿಯದಿ
ರೆಮ್ಮ ನುಡಿಗಳ ಕೇಳೆನಲು ಮಿಗೆ
ಸುಮ್ಮನೋಲಗದಿಂದ ಸರಿದನು ಭೀಮ ದುಗುಡದಲಿ ।
ಕರ್ಮಫಲವಿದು ನಿನಗೆ ಕಾಮಿನಿ
ನಿಮ್ಮ ಭವನಕೆ ಹೋಗು ಶಿಕ್ಷಿಸ
ಲಮ್ಮದೀಸಭೆ ಬಗೆಯನಾತನು ಮತ್ಸ್ಯಭೂಪತಿಯು॥ ೪೪

ಕೋಪಕವಸರವಲ್ಲ ಪತಿಗಳು
ಕಾಪುರುಷರೇ ನಿನ್ನವರು ಪರಿ
ತಾಪವನು ಬೀಳ್ಕೊಡು ಪತಿವ್ರತೆಯರಿಗೆ ಗುರು ನೀನು।
ದೀಪವಲ್ಲಾ ಕ್ಷಮೆಯಖಿಲದೋ
ಷಾಪಹಾರವು ಸರ್ವಧರ್ಮದ
ರೂಪ ಬಗೆಯಾ ಕ್ಷಮೆಯೆನಲು ಬಳಿಕೆಂದಳಿಂದುಮುಖಿ॥ ೪೫

ನೀರು ಹೊಱಗಿಕ್ಕುವುದು ಮೂಱೇ
ಬಾರಿ ಬಳಿಕದು ಪಾಪಿ ಝಾಡಿಸೆ
ಸೈರಿಸದು ಅನ್ಯಾಯಬಹುಳತೆಗೇನ ಮಾಡುವುದು ।
ಸೈರಣೆಗೆ ತಾನವಧಿಯಿಲ್ಲಾ
ಪೌರುಷದ ಪರಿ ಬಂಜೆಯಾದವ
ರಾರಯಿಕೆಯಲಿ ಜುಣುಗಿ ಜಾಱುವಿರೆಂದಳಿಂದುಮುಖಿ॥ ೪೬

ಅರರೆ ಹೆಂಗುಸು ದಿಟ್ಟೆ ಮೌನದೊ
ಳಿರಲಿದಾವಂತರವು ರಾಯನ
ಹೊರೆಯಲೀಬಾಯ್ಬಡಿಕತನ ಗರುವಾಯಿಯಲ್ಲೆನಲು।
ಕೆರಳಿದಳು ಲಲಿತಾಂಗಿ ಇಲ್ಲಿಯ
ಹಿರಿಯರಲಿ ಫಲವಿಲ್ಲ ಮಾರುತಿ
ಗಱುಹುವೆನು ಬಳಿಕಾದುದಾಗಲಿಯೆನುತ ತಿರುಗಿದಳು॥ ೪೭

ಆ ಸುದೇಷ್ಣೆಯ ಮನೆಗೆ ಬರಲವ
ಳೀಸತಿಯು ನುಡಿಸಿದಳು ತಂಗಿ ವಿ
ಳಾಸವಳಿದುದು ಮುಖದ ದುಗುಡವಿದೇನು ಹವನೆನಲು ।
ಈಸು ಮಱವೆಯಿದರಸುತನದ ಮ
ಹಾಸಘಾಡಿಕೆ ಎಮ್ಮನೀಪಪ
ಹಾಸಮಾಡುವಿರೆಂದು ದ್ರೌಪದಿ ನುಡಿದಳೊಡತಿಯನು॥ ೪೮

ಲಲನೆ ಕೇಳನ್ಯಾಯದವರನು
ಕೊಲಿಸುವೆನು ಭಯ ಬೇಡ ಪರಸತಿ
ಗಳುಪಿದವನೊಡಹುಟ್ಟಿದನೆ ಕಡುಪಾಪಿ ಹಗೆಯೆನಲು ।
ಕೊಲಿಸುವರೆ ನೀವೇಕೆ ತಪ್ಪಿನ
ಬಳಿಯಲೆನ್ನಾತಗಳು ಕೀಚಕ
ಕುಲವ ಸಮಱುವರೆನಗೆ ಕಾರಣವಿಲ್ಲ ಸಾಱಿದೆನು॥ ೪೯

ಎಂದು ಬೀಳ್ಕೊಂಡಬಲೆ ತನ್ನಯ
ಮಂದಿರಕೆ ಬಂದೊಳಗೊಳಗೆ ಮನ
ನೊಂದು ಸೈವೆಱಗಾಗಿ ಚಿಂತಿಸಿ ನೂಕಿದಳು ಹಗಲ ।
ಕೊಂದು ಕೊಂಬೆನೆ ಆತ್ಮಘಾತಕ
ನಿಂದೆ ಮುಂದಣ ಭವಕೆ ಪಾತಕ
ಹಿಂದೆ ಹತ್ತದೆ ಮಾಣದೇಗುವೆನೆನುತ ಮಱುಗಿದಳು॥ ೫೦

ಯಮಸುತಂಗಱುಹುವೆನೆ ಧರ್ಮ
ಕ್ಷಮೆಯ ಗರ ಹೊಡೆದಿಹುದು ಪಾರ್ಥನು
ಮಮತೆಯುಳ್ಳವನೆಂಬೆನೇ ತಮ್ಮಣ್ಣನಾಜ್ಞೆಯಲಿ ।
ಭ್ರಮಿತನಾಗಿಹನುಳಿದರಿಬ್ಬರು
ಶಮಣರುಗಳೀನಾಯ ಕೊಲಲ
ಕ್ಷಮರು ನಿಸ್ಸಂದೇಹವೆಂದಳು ತನ್ನ ಮನದೊಳಗೆ॥ ೫೧

ಎಲ್ಲರೊಳು ಕಲಿಭೀಮನೇ ಮಿಡು
ಕುಳ್ಳ ಗಂಡನು ಹಾನಿಹರಿಬಕೆ
ನಿಲ್ಲದಂಗೈಸುವನು ಕಡು ಹೀಹಾಳಿಯುಳ್ಳವನು ।
ಖುಲ್ಲನಿವನುಪಟಳವನಾತಂ
ಗೆಲ್ಲವನು ಅಱುಹುವೆನು ಬಳಿಕವ
ನಲ್ಲಿ ಹುರುಳಿಲ್ಲದಡೆ ಕುಡಿವೆನು ಘೋರತರವಿಷವ॥ ೫೨

ನಿಳಯುವನು ಹೊಱವಂಟು ಕಂಗಳ
ಬೆಳಗು ತಿಮಿರವ ತೆಗೆಸೆ ಕಂಕಣ
ಲಲಿತಝೇಂಕೃತಿಯಿಂದ ತೂಗುವ ವಾಮಭುಜಲತೆಯ।
ಒಲಿದು ಮೇಲುದು ಜಾಱೆ ನಡುಗುವ
ಮೊಲೆಯ ಭರದಲಿ ಅಡಿಯಿಡುತ ಕಳ
ವಳದ ಕರಣದಲಬಲೆ ಬಂದಳು ಬಾಣಸಿನ ಮನೆಗೆ॥ ೫೩

ಆರಲಱಿದನೊ ಭೀಮನೀಸೂ
ವಾರವಿದ್ಯೆಯ (ಭಾಪು ವಿಧಿ ಮುನಿ
ದಾರನಾವಂಗದಲಿ ಬರಿಸದು) ಶಿವ ಶಿವಾಯೆನುತ।
ನಾರಿ ನಸುನಗುತೊಳಗೆ ಹೊಕ್ಕ ಬ
ಕಾರಿಮಂಚದಲಿರಲು ನಿದ್ರಾ
ಭಾರವಿಹ್ವಲಕರಣನನು ಹೊದ್ದಿದಳು ದುಗುಡದಲಿ॥ ೫೪

ಎಬ್ಬಿಸಲು ಭುಗಿಲೆಂಬನೋ ಮೇ
ಣೊಬ್ಬಳೀತಕೆ ಬಂದೆ ನೋಱೆಯ
ಮಬ್ಬಿದೇನೆಂದೆನ್ನ ಸಂತೈಸುವನೊ ಸಾಮದಲಿ।
ತುಬ್ಬುವುದೊ ತಾ ಬಂದ ಬರವಿದು
ನಿಬ್ಬರವಲಾ ಜನದ ಮನಕಿ
ನ್ನೆಬ್ಬಿಸಿಯೆ ನೋಡುವೆನೆನುತ ಸಾಱಿದಳು ವಲ್ಲಭನ॥ ೫೫

ಮೆಲ್ಲಮೆಲ್ಲನೆ ಮುಸುಕ ಸಡಿಲಿಸಿ
ಗಲ್ಲವನು ಹಿಡಿದಲುಗಲಪ್ರತಿ
ಮಲ್ಲನೆದ್ದನು ನೋಡಿದನು ಪಾಂಚಾಲನಂದನೆಯ।
ವಲ್ಲಭೆಯ ಬರವೇನು ಮುಖದಲಿ
ತಲ್ಲಣವು ತಲೆದೋಱುತಿದೆ ತಳು
ವಿಲ್ಲದಱುಹಿರುಳೇಕೆ ಬಂದೆ ಲತಾಂಗಿ ಹೇಳೆಂದ॥ ೨

ನಿನ್ನೆ ಹಗಲಱಿಯುಟ್ಟ ಕೀಚಕ
ಕುನ್ನಿಯೊದೆದನು ರಾಜಸಭೆಯಲಿ
(ನಿನ್ನ ವಂದಿಗರಿರಲು ಪರಿಭವವುಚಿತವೇ ತನಗೆ।)
ಎನ್ನನವ ಬೆಂಬಳಿಯ ಬಿಡ ನಾ
ನಿನ್ನು ಬದುಕುವಳಲ್ಲ ಹೊಲ್ಲೆಹ
ನಿನ್ನನೇ ತಾಗುವುದೆನಲು ಖತಿಗೊಂಡನಾ ಭೀಮ॥ ೩

ಉಸುರಲಾಗದು ನಿನ್ನ ಹರಿಬಕೆ
ಮಿಸುಕುವವರಾವಲ್ಲ ಹೆಂಡಿರ
ಗಸಣಿ ಗೊಂಬವರಲ್ಲ ಹುದುವಿನ ಗಂಡುತನವಿದನು।
ಶಶಿವದನೆ ಸುಡು ಕಷ್ಟವೀಯುಪ
ದೆಸೆಯವರು ನಾವಲ್ಲ ನಿನ್ನಪ
ರಸಮುಸಾಹಸರುಳಿದ ನಾಲ್ವರಿಗಱುಹು ಹೋಗೆಂದ॥ ೪

ಹೊದ್ದುವುದು ಫಲುಗುಣನ ಪದದಲಿ
ಬಿದ್ದು ಯಮನಂದನನ ಮತಿಯನು
ತಿದ್ದುವುದು ಸಹದೇವನಕುಲರ ಕೈಯ್ಯೊಳಿನಿಸುವುದು।
ಗೆದ್ದುಕೊಡುವರು ನಿನ್ನ ಪಾಲಿಸ
ದಿದ್ದರಾದರೆ ದೋಷವವರನು
ಹೊದ್ದುವುದು (ಸಾಕಿನ್ನು ನಿನ್ನಯ ತೊಡಕು ಬೇಡೆಂದ॥) ೫

ಅಂದು ದುಶ್ಶಾಸನನ ಕರುಳನು
ತಿಂದಡಲ್ಲದೆ ತಣಿವು ದೊರಕೊಳ
ದೆಂದು ಹಾಯ್ದಡೆ ಹಲುಗಿರಿದು ಮಾಣಿಸಿದ ಯಮಸೂನು।
ಇಂದು ಕೀಚಕ ನಾಯನೆಱಗುವೆ
ನೆಂದು ಮರನನು ನೋಡಿದರೆ ಬೇ
ಡೆಂದ ಹದನನು ಕಂಡೆ ಇನ್ನೆನಗುಂಟಿಯಪವಾದ॥ ೬೦

ಹೆಣ್ಣ ಹರಿಬಕ್ಕೋಸುಗವೆ ತ
ಮ್ಮಣ್ಣನಾಜ್ಞೆಯ ಮೀಱಿ ಕುಂತಿಯ
ಚಿಣ್ಣ ಬದುಕಿದನೆಂದು ನುಡಿವರು ಕುಜನರಾದವರು।
ಅಣ್ಣನವರಿಗೆ ದೂಱುವುದು ನಾ
ವುಣ್ಣದುರಿಯಿವು ರಾಯನಾಜ್ಞೆಯ
ಕಣ್ಣಿಯಲಿ ಬಿಗಿವಡೆದು ಕೆಡೆದೆವು ಕಾಂತೆ ಕೇಳೆಂದ॥ ೬೧

ಗಂಡುಗರ್ವವ ನುಡಿಯೆವೆಮ್ಮಯ
ದಂಡಿ ತಾನದು ಬೇಱಿ ನಾವೀ
ಭಂಡತನದಲಿ ಬದುಕಲಱಿಯೆವು ಧರ್ಮನಿರ್ಮವನು।
ಕೊಂಡು ಕೊನರುವರಲ್ಲ ರಾಯನ
ನಂಡಲೆದು ಕೀಚಕನ ತಲೆಯನು
ಸೆಂಡನಾಡಿಸು ರಮಣಿ ಮೇಣರ್ಜುನಗೆ ಹೇಳೆಂದ॥ ೬೨

ತರುಣಿ ದಿಟ ಕೇಳೆಂದು ಮೊದಲಾ
ಗರಸಿ ನೀ ನಾಲ್ವರಿಗೆ(ನಾವೆಡೆ
ಮುರಿದವರು ಬಿಟ್ಟವರು ನಿನ್ನಯ ಸೂಳುಪಾಳೆಯವ।
ಅರಸನಂ ಪ್ರಾರ್ಥಿಸುವುದರ್ಜುನ
ವರನಕುಲಸಹದೇವರಿಗೆ ವಿ
ಸ್ತರಿಸಿ ಹೇಳುವುದೆನ್ನೊಡನೆ ಫಲಸಿದ್ಧಿಯಿಲ್ಲೆಂದ॥ ೬೩

ಕೇಳುತಿದ್ದಳು ಕೊರಳಸೆರೆ ಗೋ
ನಾಳಿಗೌಕಿತು ಬಿಕ್ಕಿ ಬಿಕ್ಕಿ ವಿ
ಲೋಲಲೋಚನೆ ಬಳಿಕ ನನೆದಳು ಬಾಷ್ಪವಾರಿಯಲಿ!
ಶೂಲ ಮುಱುವೊನೆಗೊಂಡವೊಲು ಸುಳಿ
ವಾಳೆ ಝುಳತಾಗಿದವೊಲುದರ
ಜ್ವಾಲೆ ನೆತ್ತಿಗೆ ನಿಲುಕೆ ಮಿಡುಕಿದಳಬಲೆ ಬಿಸುಸುಯ್ದು|| ೬೪

ಜನನವೇ ಪಾಂಚಾಲರಾಯನ
ಮನೆ ಮನೋವಲ್ಲಭರದಾರೆನೆ
ಮನುಜಗಿನುಜರು ಗಣ್ಯರೇ ಗೀರ್ವಾಣರಿಂ ಮಿಗಿಲು|
ಎನಗೆ ಬಂದೆಡಜೀವಿರಾಟನ
ವನಿತೆಯುರುಗಳ ಮುಡಿಯ ಕಟ್ಟುವ
ತನುವ ತಿಗುರುವ ಕಾಲನೊತ್ತುವ ಕೆಲಸದುತ್ಸಾಹ|| ೬೫

ಹಗೆಗಳಿಗೆ ತಂಪಾಗಿ ಬದುಕುವ
ಮುಗುದರಿನ್ನಾರುಂಟು ಭಂಗಕೆ
ಹೆಗಲ ಕೊಟ್ಟಾನುವ ವಿರೋಧಿಗಳುಂಟೆ ಲೋಕದಲಿ|
ವಿಗಡ ಬಿರುದನು ಬಿಸುಟ ಬಡಿಹೋ
ರಿಗಳು ಪಾಂಡವರಂತೆ ಮೂಗು
ರ್ಚಿಗಳದಾರುಂಟೆಂದು ದ್ರೌಪದಿ ಹಿರಿದು ಹಲುಬಿದಳು|| ೬೬

ಕಾಲಯಮ ತೊಡಕಿದರೆ ಮುಱಿವೆ
ಚ್ಚಾಳುತನದವರೆನ್ನನೊಬ್ಬಳ
ನಾಳಬಾರಿರಿ ಪಾಪಿಗಳಿರಪಕೀರ್ತಿಗಳುಕರಲ|
ತೋಳಹೋಱಿ ನಿಮಗೇಕೆ ಭೂಮಿಾ
ಪಾಲವಂಶದೊಳುದಿಸಲೇತಕೆ
(ಕೂಳುಗೇಡಿಂಗೊಡಲ ಹೊಱುವಿರಿ) ಎಂದಳಿಂದುಮುಖಿ|| ೬

ಧರೆಯು ಭಂಡಾರವನು ಪುರವನು
ಕರಿತುರಗರಥಪಾಯದಳವನು
ಕುರುಕುಲಾಗ್ರಣಿ ಸೆಳೆದುಕೊಂಡನು ನಿಮ್ಮ ಹೊಱವಡಿಸಿ।
ದುರುಳ ಕೀಚಕಗೆನ್ನ ಕೊಟ್ಟಿರಿ
ಪರಿಮಿತದಲಿರವಾಯ್ತು ನಿಮ್ಮೈ
ವರಿಗೆ ಲೇಸಲ್ಲಕಟ ಎಂದಬುಜಾಕ್ಷಿ ಹಲುಬಿದಳು॥ ೬೮

ಭೀಮ ಕೊಟ್ಟೈ ತನಗೆ ಸಾವಿನ
ಸೇಮವನು ನಿಮ್ಮಣ್ಣನಾಜ್ಞೆ ವಿ
ರಾಮವಾಗದೆ ನಡೆಯೆ ಧರ್ಮದ ವೈಸಿರಿಯನಱಿಮು।
ಕಾಮಿನಿಯ ಕೇಳಿಯಲಿ ನೆನೆವುದು
ತಾಮಸದಿ ತಾ ಮೀಱಿ ನಡೆದು
ದ್ದಾಮತೆಯ ಸೈರಿಸುವುದೆಂದಱಗಿದಳು ಚರಣದಲಿ॥ ೬೯

ಎನಲು ಕಂಬನಿದುಂಬಿದುದು ಕಡು
ನೆನೆದುದಂತಃಕರಣ ರೋಷದ
ಘನತೆ ಹೆಚ್ಚಿತು ಹಿಂಡಿದನು ಹಗೆಗಳನು ಮನದೊಳಗೆ।
ತನುಪುಳಕವುಬ್ಬರಿಸೆ ಮೆಲ್ಲನೆ
ವನಿತೆಯನು ತೆಗೆದಪ್ಪಿ ಪರಲೋ
ಚನಪಯೋಧಾರೆಗಳ ತೊಡೆದನು ಭೀಮ ಸೆಱಗಿನಲಿ॥ ೭೦

ಕುರುಳ ನೇವರಿಸಿದನು ಗಲ್ಲವ
ನೊರಸಿ ಮುಂಡಾಡಿದನು ಮಂಚದ
ಹೊರೆಯ ಗಿಂಡಿಯ ನೀರಿನಲಿ ತೊಳೆದನು ಮುಖಾಂಬುಜವ।
ಅರಸಿ ಬಿಡು ಬಿಡು ಖಾತಿಯನು ವಿ
ಸ್ತರಿಸಲೀಕಿನ್ನಣ್ಣನಾಜ್ಞೆಯ
ಗೆರೆಯ ದಾಂಟದೆ ದಾಂಟಿದೆನು ಹೋಗೆಂದನಾ ಭೀಮ॥ ೭೧

ಬಸುರ ಬಗಿವೆನು ಕೀಚಕನ ನಸು
ಮಿಸುಕಿದರೆ ವೈರಾಟ ವಂಶದ
ಹೆಸರ ತೊಡೆವೆನು ನಮ್ಮನಱಿದೊಡೆ ಕೌರವವ್ರಜವ।
ಕುಸುರಿದಱಿವೆನು ಭೀಮ ಕಷ್ಟವ
ನೆಸಗಿದನು ಹಾ ಎಂದರಾದಡೆ
ಮುಸುಡನಮರಾದ್ರಿಯಲಿ ತೀವೆನು ದೇವಸಂತತಿಯ॥ ೭೨

ಮುನಿದನಾದಡೆ ಅಣ್ಣತನವಿಂ
ದಿನಲಿ ಹಱಿದುದು ಪಾರ್ಥನಕುಲರು
ಕನಲಿದರೆ ಕೈದೋಱುವೆನು ಸಹದೇವನಿವರುಗಳ।
ಅನುಜನೆಂಬೆನೆ ಕೃಷ್ಣನಡಹಾ
ಯ್ದನೆ ಮುರಾರಿಯ ಮಿಾಱಿದೆನು ಹೋ
ಗೆನಗೆ ಸಮಬಲರಾರು(?)ತಱಿವೆನು ಕೀಚಕಾನ್ವಯವ॥ ೭೩

ಈಸುದಿನವೆಮ್ಮಣ್ಣನಾಜ್ಞಾ
ಪಾಶದಲಿ ಸಿಕ್ಕಿರ್ದೆ ಸಿಂಹದ
ಕೂಸ ನರಿ ಕೆಣಕುವವೊಲೀ ಕುರುಕೀಚಕಾದಿಗಳು।
ಘಾಸಿಯಾದರು ಕೆಣಕಿ ನಾಯ್ಗಳ
ವೀಸಬಡ್ಡಿಯಲಸುವ ಕೊಂಬೆನು
ವಾಸಿಧರ್ಮದ ಮೇರೆ ತಪ್ಪಿತು ಕಾಂತೆ ಕೇಳೆಂದ॥ ೭೪

ತರುಣಿ ಕೀಚಕ ಕೌರವೇಂದ್ರರ
ಹರಣಕಿದೆ ಕೋ ಸಂಚಕಾರವ
(ಕೆರಳಿದಡೆ ಈ ಭೀಮ ಬಗೆವನೆ ನೀತಿಗೀತಿಗಳ)
ಕೆರಳಿಚಿದೆ ಇನ್ನೇನು ನಿನ್ನಯ
ಹರಿಬವೆನ್ನದು ನಾಯಿ ಜಾರನ
ಕರೆದು ಸಂಕೇತದಲಿ ಸೂಚಿಸು ನಾಟ್ಯಮಂಟಪವ ॥ ೭೫

ಅಲ್ಲಿಗಿರುಳ್ಳೈತಂದು ಮಾಱೆಯಲಿ
ಝಲ್ಲನುದರವ ಬಗಿದು ರಕುತವ
ಚೆಲ್ಲುವೆನು ಶಾಕಿನಿಯರಿಗೆ ಸಂದೇಹ ಬೇಡಿವಕೆ।
ಅಲ್ಲಿ ಕೆಲಬಲನಱಿದುದಾದರೆ
ಬಲ್ಲೆನದಕೌಷಧಿಯ ಕಱೆಮುಱೆ
ಯಿಲ್ಲ ಮಾನಿನಿ ಹೋಗೆನುತ ಬೀಳ್ಕೊಟ್ಟನಂಗನೆಯ॥ ೭೬

ಹರುಷದಲಿ ಹೆಚ್ಚಿದಳು ಪುರುಷರ
ಪುರುಷನಲ್ಲಾ ಭೀಮ ತನ್ನಯ
ಪರಮಸುಕೃತೋದಯವಲಾ ನೀನೊಬ್ಬನೆಂದೆನುತ।
ಅರಸಿ ಕಾಂತನ ಬೀಳುಕೊಂಡಳು
ಮರಳಿದಳು ನಿಜಭವನಕತ್ತಲು
ತರಣಿ ತೆಗೆದನು ತಾವರೆಯ ಬಾಗಿಲನ ಬೀಯಗವ॥ ೭೭

ಆದಿವಸವರಮನೆಗೆ ಬರುತ ವೃ
ಕೋದರನ ವಲ್ಲಭೆಯ ಕಂಡನು
ಕೈದುಡುಕಲಂಜಿದನು ಮಾತಾಡಿಸಿದನಂಗನೆಯ।
ಹೋದಿರುಳ ಯುಗವಾಗಿ ನೂಕಿದೆ
ನೀ ದಯಾಂಬುಧಿ ಕುಸುಮಶರ ಯಮ
ನಾದ ನೀನೇ ಬಲ್ಲೆಯೆಂದನು ಕೀಚಕನು ನಗುತ॥ ೭೮

ಕುಸುಮಶರ ಯಮನಹನಮೃತವೇ
ವಿಷವಹುದು ಕೇಳಾಲಿಕಲುಗಳು
ಬಿಸಿಯಹುವು ಬಾಂಧವರು ವೈರಿಗಳಹರು ನಿಮಿಷದಲಿ।
ಒಸೆದರೊಲ್ಲದರಹರು ಲೋಗರ
ಶಶಿವದನೆಗಳುಪಿದ ದುರಾತ್ಮನ
ವಸುಧೆ ಹೊಱುವುದೇ ಪಾಪಿಕೀಚಕ ಎಂದಳಿಂದುಮುಖಿ॥ ೭೯

ಲಗೆ ಕಲುವ್ಯೈಯಾದೆ ಕಡು ಕೋ
ತೆಯೆತ್ತಲು ಕರ್ಕಶಾಂಗದ
ಹಿದೆತ್ತಲು ಮಾಯವೇಷವ ಧರಿಸಿದೆಯೊ ಮೋಣು।
ಹೆನಲು ಕೇಳೆಲವೊ ಪರಸತಿ
ಪಿದಾತಂಗಮೃತ ವಿಷ ಕೋ
ತೆ ಕರ್ಕಶವೆನುತಲವ ತುಡುಕಿದನು ಮುಂದಲೆಯ॥ ೮೮
ಚಪಳೆ ಫಡ ಹೋಗೆನುತ ಹಾಯ್ಬನು
ಣಮತಿ ಮುಂಗೈಯ ಪವನಜ
ರಭಾಗಕೆ ಹಾಯ್ದು ಹಿಡಿದನು ಕೀಚಕನ ತುಱುಬ।
ಳಬಲ ಕಳವಳಿಸಿದನು ಕಡು
ಿತನಾದನು ಹೆಂಗುಸಲ್ಲಿವ
ಸದನು ತೆಗೆ ಕರುಳನೆನುತೊಳಹೊಕ್ಕು ಹೆಣಗಿದನು॥ ೮೯
ತಿರುಗಿ ಪೈಸರವೋಗಿ ಪವನಜ
ರಳಿ ತಿವಿದನು ಕೀಚಕನ ಹೇ
ವನೆದೆ ಜರ್ಝರಿತವಾಯಿತು ಕಾಱಿದನು ಕರುಳ।
ದುವಾಲಿಗಳೊಲೆದು ಕಣ್
ಗಿ ದೊಪ್ಪನೆ ಕೆಡೆದು ನಿಮಿಷಕೆ
ರಳಿ ಹರಣವ ಕಳುಹಿ ಕಳಿದುದು ಕಾಯ ಕೀಚಕನ॥ ೯೦
ತಲೆಯನೆದೆಯೊಳಗಿಕ್ಕಿ ಕೈಕಾ
ಳನು ಬಸುಱೊಳಗಿಕ್ಕಿ ದೂರಕೆ
ಲಗಿದನು ತೋಱಿದನು ತರುಣಿಗೆ ಕೀಚಕನ ಹವನ।
ಳನು ಕಾಲನ ಕೋಣ ತುಳಿದಂ
ಯೊಳೊಱಗಿರೆ ಕಂಡು ಕಾಮಿನಿ
ವಳಸಿ ನಗುತಾಗ ತಕ್ಕೈಸಿದಳು ವಲ್ಲಭನ॥ ೯೧

ತರುಣಿ ಬಿಡು ಸಾರೆನುತ ಪವನಜ
ಸರಿದನತ್ತಲು ದ್ರುಪದನಂದನೆ
ಕರೆದು ನುಡಿದಳು ಕಾಹಿನವರಿಗೆ ಕೀಚಕನ ಹದನ।
ದುರುಳ ಬಲುಹಿಂದೆನ್ನನೆಳೆದರೆ
ಕೆರಳಿದರು ಗಂಧರ್ವರೀತಗೆ
ಹಱಿವ ಕಂಡರು ನೋಡಿ ಎನೆ ಹರಿತಂದರವಳೊಡನೆ॥ ೯೨

ಅಱಿಸಿ ಕೈದೀವಿಗೆಯುಲವನಿಹ
ಪರಿಯ ಕಂಡರು ಕಾಹಿನವದಿರು
ಹರಿದು ಹೇಳಿದರಾತನನುಜಾತರಿಗೆ ಬೇಗದಲಿ।
ಕರದಿ ಬಾಯ್ಗಳ ಹೊಯ್ದು ಹೊಟ್ಟೆಯೊ
ಳುರಿ ಛಡಾಳಿಸೆ ಬಿಟ್ಟಮಂಡೆಯೊ
ಳಿರದೆ ಬಂದರು ಕೀಚಕನ ಸೋದರರು ಬಾಯ್ಬಿಡುತ॥ ೯೩

ಇವಳಿಗೋಸುಗವಳಿದನೇ ಸಹ
ಭವನು ತಪ್ಪೇನೆನುತ ನಡುವಿರು
ಳವದಿರೈತಂದರು ವಿರಾಟಂಗಱುಹಿದರು ಹದನ।
(ಅವಳನಾತನ ಕೂಡೆ ಕಳುಹುವ
ಡೆವಗೆ ನೇಮವೆ)ಎಂದು ಬೀಳ್ಕೊಂ
ಡವರು ಮರಳುತೆ ಬಂದು ಹಿಡಿದರು ಕಮಲಲೋಚನೆಯ॥೯೪

ತೆಗೆದು ಮಂಚದಲವನ ಹೆಣವನು
ಬಿಗಿದು ಆತನ ಕಾಲದೆಸೆಯಲಿ
ನಗುವುದಿನ್ನೊಮ್ಮೆನುತ ಕಟ್ಟಿದರವರು ಕೋಮಲೆಯ।
ಬೆಗಡುಗೊಂಡಂಭೋಜಮುಖಿಯು
ಬ್ಬೆಗದಲೊಱಲಿದಳಕಟಕಟ ಪಾ
ಪಿಗಳಿರಾ ಗಂಧರ್ವರಿರ ಹಾ ಎನುತ ಹಲುಬಿದಳು॥ ೯೫

ಕೇಳಕಟ ಜಯವಿಜಯಸೇನನೆ
ಕೇಳು ವಿಜಯ ಜಯಾಬ್ಧಿಸೇನನೆ
ಕೇಳು ಜಯಸೇನನೆ ದುರಾತ್ಮಕರೆನ್ನನೆಳೆದೊಯ್ದು!
ಬೀಳಿಕುವರಗ್ನಿಯಲಿ ನೀವಿದ
ಕೇಳಿ ತಡಮಾಡದಿರಿ ಎನಲದ
ಕೇಳಿದನು ಕಲಿಭೀಮ ಸತಿಯಾಕ್ರಂದನಧ್ವನಿಯ|| ೯೬
ಈ ದುರಾತ್ಮರಿಗಗ್ರಜನ ಸಾ
ವೈದದೇ ತಮ್ಮಣ್ಣನಲ್ಲಿಗೆ
ಹೊಯ್ದು ಕಳುಹಲು ಬೇಕಲಾ ಕುನ್ನಿಗಳನೀಕ್ಷಣಕೆ |
ಬೈದಡೇನುಹುದೆನುತ ರೋಷಿಸಿ
ಹಾಯ್ದು ಮಾರುತಿ ರುದ್ರಭೂಮಿಯ
ನೈದಿದನು ಘಡಯೆನುತ ಕೊಂಡನು ಮುಱಿದು ಹೆಮ್ಮರನ||೯೭
ತಿರುಹಿದನು ಹೆಮ್ಮರನನನಿಬರ
ಧರೆಯಲಿಟ್ಟೊರಸಿದನು ಪಿಸಿಪಿಸಿ
ಗೊಜಲಿ ಚಿಮ್ಮಿದ ಚಪಳರನು ಬೆಂಬತ್ತಿ ಬಱಿಕೈದು |
ಕುಱಿದಱಿಯ ಮಾಡಿದನು ನೂಱ್ರೈ
ವರನು ಕೊಂದನು ಸತಿಯ ಬಿಡಿಸಿಯೆ
ಮರಳಿ ಮಿಣ್ಣನೆ ಬಂದು ಪೊಕ್ಕನು ಬಾಣಸಿನ ಮನೆಯ|| ೯೮
ಸುಳಿಯಲಮ್ಮದು ಪೌರಜನವಿವ
ರಳಿವ ವಚಸಿಸಲಮ್ಮದೀಕೆಯ
ನಲುಕಲಮ್ಮದು ನೋಡಲಮ್ಮದು ಮಂದಿ ತಮತಮಗೆ |
ನಳಿನಮುಖಿ ನಸುನಗುತ ತಿಳಿಗೊಳ
ನೊಳಗೆ ಹೊಕ್ಕಳು ಮಿಂದು ಬೀದಿ
ಗಳೊಳಗೆ ಬರುತಿರೆ ಕಂಡು ಕೈಗಳ ಮುಗಿದುದಖಿಳಜನ|| ೯೯

ಈಕೆಗೋಸುಗವಳಿದನಕಟವಿ
ವೇಕಿ ಕೀಚಕನೆಂದು ಕೆಲಬರಿ
ದೇಕೆ ನಮಗೀಚಿಂತೆ ಶಿವ ಶಿವ ಎಂದು ಕೆಲಕೆಲರು|
ನೂಕಿ ನೋಡುವ ಮಂದಿಮಧ್ಯದ
ಲೀಕೆ ಮೆಲ್ಲನೆ ಬರುತಲಾ ಲೋ
ಕೈಕವೀರನ ಕಂಡಳಾ ಬಾಣಸಿನ ಬಾಗಿಲಲಿ|| ೧೦೦
ಮುಗುಳು ನಗೆಯಲಿ ಕಣ್ಣ ಕಡೆಯಲಿ
ವಿಗಡಭೀಮನ ನೋಡಿ ಕೈಗಳ
ಮುಗಿದೆವಾವ್ ಗಂಧರ್ವಪತಿಗೆ ನಮೋ ನಮೋ ಎನುತ
ಹೊಗರಿಡುವ ಹರುಷದಲಿ ರೋಮಾ
ಳಿಗಳ ಗುಡಿಯಲಿ ತನ್ನ ನಿಳಯಕೆ
ಮುಗುದೆ ಬಂದಳು ಸೂರ್ಯನಡರಿಸುವಘುಪರ್ವತವ|| ೧೦೧
ಅಳಲು ಕೈಮಿಗಲಾ ವಿರಾಟನ
ಲಲನೆ ಸೈರಂಧ್ರಿಯನು ಕರಸಿದ
ಳೆಲೆ ಮಹಾತುಮೆ ತಾಯೆ ಶರಣಾಜುವೆನು ನಿಮಗಿನ್ನು|
ಹೊಳಲೊಳಿದ್ದರೆ ಭೀತಿ ಘನ ನೀ
ವೊಲಿದ ತಾವಿಗೆ ಬಿಜಯಮಾಡುವು
ದುಳುಹಬೇಹುದು ನಮ್ಮನೆನಲಿಂತೆಂದಳಿಂದುಮುಖಿ || ೧೦೨
ಎಮ್ಮದೇನಪರಾಧ ದೇವಿಯೆ
ನಿಮ್ಮ ತಮ್ಮನು ತಪ್ಪಿ ನಡೆದರೆ
ಎಮ್ಮ ರಮಣರು ಸೈರಿಸದೆ ಸೀಳಿದರು ದುರ್ಜನರ|
ನಿಮ್ಮ ನಾವೋಲೈಸಿ ಮರಳಿದು
ನಿಮ್ಮ ಕೆಡಿಸುವರಲ್ಲ ಧೂರ್ತರು
ತಮ್ಮ ಕತದಲಿ ತಾವು ಕೆಟ್ಟರು ನೀತಿಬಾಹಿರರು || ೧೦೩

ಅಳುಕದಿರಿ ಹದಿಮೂಱುದಿವಸವ
ಕಳೆದ ಬಳಿಕೆಮಗೆಲ್ಲ ಲೇಸಹು
ದಳಿದುಹೋದರು ದುಷ್ಟರಾದವರಿನ್ನು ಭಯಬೇಡ ।
ಕಲಹದವರಾವಲ್ಲೆನುತ ನಿಜ
ನಿಳಯವನು ಸಾರಿದಳು ದ್ರೌಪದಿ
ಘಳಿಗೆಘಳಿಗೆಗೆ ಕೀಚಕನ ವೃತ್ತಾಂತ ಪಸರಿಸಿತು ॥ ೧೮೪

## ೪. ದಾಳಿಯಿಟ್ಟನು ತೆಂಕದಿಕ್ಕಿನಲಿ

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವದೂತರವನಿಯ
ಮೇಲೆ ತೊಳಲಿದರಖಿಸಿಕಾಣದೆ ಪಾಂಡುನಂದನರ।
ಹೋಲುವೆಯನೊಳಗಾಗಿ ಹಿಡಿಯದೆ
ಕಾಲ ಸವೆಯಲು ನಾಲ್ಕುದಿಕ್ಕಿನ
ಮೂಲೆಯವರೈತಂದು ಬಿನ್ನೈಸಿದರು ಕುರುಪತಿಗೆ॥ ೧

ವಿತಳದೊಳು ಹೊಕ್ಕಿರಲಿ ಅಮರಾ
ವತಿಯೊಳಗೆ ಮೇಣಿರಲಿ ನಮ್ಮಾ
ಕ್ಷಿತಿಯೊಳಗೆ ಸುಳಿವಿಲ್ಲ ನೃಪ ಕುಂತೀಕುಮಾರಕರ।
ಮತಿಯ ಹಬ್ಬುಗೆಯಿಂದ ನಾನಾ
ಗತಿಯೊಳಗೆ ಹೊಕ್ಕಖಿಸಿದೆವು ಭೂ
ಪತಿಯೆ ಕೇಳ್ ನಿರ್ನಾಮರಾದರು ನಿನ್ನ ವೈರಿಗಳು॥ ೨

ಒಂದುವಾರ್ತೆಯಲೈ ತ್ರಿಗರ್ತಾ
ನಂದಕರವಿದು ಜೀಯ ಕೀಚಕ
ವೃಂದವನು ಗಂಧರ್ವರಿರುಳೈತಂದು ಖಾತಿಯಲಿ।
ಕೊಂದು ಹೋದರು ರಾವಣನ ವಿಧಿ
ಯಿಂದು ಕೀಚಕಗಾಯಿತೆನೆ ಕೇ
ಳ್ದೊಂದು ನಿಮಿಷ ಮಹೀಶ ಮೌನವ ಹಿಡಿದು ಬಿಖಿಗಾದ॥ ೩

ಹೇಳು ಹೇಳಿನ್ನೊಮ್ಮೆ ಮತ್ಸ್ಯನ
ತೋಳು ಮುರಿದುದೆ ಸುಭಟರೊಳು ಕ
ಟ್ಟಾಳು ಕೀಚಕನಳಿದನೇ ಗಂಧರ್ವರಿರಿದವರೆ।
ಮೇಲಣವರಿಗೆ ಮರ್ತ್ಯರಿಗೆ ಕೈ
ಕಾಲುಮೆಟ್ಟಿನ ತೋಟಿಯೇತಕೆ
ಹೋಲದಿದು ಹುಸಿ ಹೋಗೆನುತ ಮುಖದಿರುಹಿದನು ಭೂಪ॥ ೪

ಅಹುದು ಜೀಯವಧರಿಸು ದಿವಿಜರ
ಮಹಿಳೆಯೋಲೈಸಿದಳು ಮತ್ಸ್ಯನ
ಮಹಿಳೆಯನು ಬಳಿಕಾಕೆಯೋಲಗದೊಳಗೆ ಸತಿಯಿರಲು।
ಕುಹಕಿ ಕಂಡಳುಪಿದರೆ ನಾಟ್ಯದ
ಗೃಹಕೆ ಸೂಚನೆಗೊಟ್ಟು ನಿಮಿಷಕೆ
ರಹವ ಮಾಡಿದರವರು ಸವರಿದರಖಿಳ ಕೀಚಕರ॥ ೫

ಅವನಿಪತಿ ಮೂಗಿನಲಿ ಕರಪ
ಲ್ಲವವನಿಟ್ಟನು ತಲೆಯ ತೂಗಿದ
ನವಳು ದ್ರೌಪದಿ ಖಳನ ಕೊಂದವ ಭೀಮ ಗಂಧರ್ವ।
ದಿವಿಜಸತಿಯೆತ್ತಲು ವಿರಾಟನ
ಭವನದೋಲಗವೆತ್ತಲಿದು ಪಾಂ
ಡವರ ಕೃತ್ರಿಮಮಂತ್ರ ಮರೆಯಿರಿಗಾಜರವರೆಂದ॥ ೬

ಪರಿಮಳವ ಕದ್ದೋಡುವನಿಲನ
ಹರಿವ ಹೆಜ್ಜೆಯ ಹತ್ತುವರೆ ಮಧು
ಕರನೆ ಬಲ್ಲದು ಜೀಯ ಬಲ್ಲಿರಿ ನಿಮ್ಮವರ ಪರಿಯ।
ಹರೆದ ಮಾತಿನ ಹದನ ತಾನಿದು
ಚರರಿಗಿದು ಗೋಚರಿಸುವುದೆ ಎಂ
ದರಸನನು ಕೊಂಡಾಡಿದರು ಮಂತ್ರಿಗಳುತಮುತಮಗೆ॥ ೭

ಅರಿವಿರಾಟನ ಪುರಕೆ ಹಾಯಿದು
ತುಱುಸೆಱೆಯ ತೆಗೆಸಿದರೆ ಪಾಂಡವ
ರಿರರು ಧರ್ಮದ ಮೇರೆ ಮರ್ಯಾದೆಗಳ ಬಲ್ಲವರು।
ಅರಿಬಲವನಂಘೈಸುವರು ನಾ
ವಱಿದುಕೊಂಬೆವು ಬಳಿಕ ವನದಲಿ
ವರುಷಹದಿಮೂಱಕ್ಕೆ ಕೊಡುವೆವು ಮತ್ತೆ ವೀಳಯವ॥ ೮
ಒಳ್ಳಿತಿದು ನಿರ್ದಿಷ್ಟನಯ ನ
ಮ್ಮೆಲ್ಲರಭಿಮತವಹುದು ರಿಪುಗಳ
ಖುಲ್ಲವಿದ್ಯೆಯನಱಿವುಪಾಯಕೆ ಬೇಱೆ ಮತವಿಲ್ಲ।
ಅಲ್ಲಿ ಪಾಂಡವರಿಹರು ಸಂಶಯ
ವಿಲ್ಲ ದೇಶದ ಸೊಂಪು ಸಿರಿ ಮ
ತ್ತೆಲ್ಲಿಯೂ ಹಿರಿದಿಲ್ಲ ನಿಶ್ಚಯವೆಂದನಾ ಕರ್ಣ॥ ೯
ಗುರುವಿಗಭಿಮತವಹರೆ ಕೃಪ ಮುಖ
ದಿರುಹದಿದ್ದರೆ ಭೀಷ್ಮಮನದಲಿ
ಮುರಿಯದಿದ್ದರೆ ಗುರುಕುಮಾರನ ಮತಿಗೆ ಸೇರುವರೆ।
ವರಶಕುನಿಯುಹುದೆಂದರೀ ಸೋ
ದರರು ತಪ್ಪಲ್ಲೆಂದರಾದರೆ
ಅರಸ ನೆಗಳ್ದುದೆ ಮಂತ್ರವೆಂದು ಸುಶರ್ಮ ಹೊಗಳಿದನು॥ ೧೦
ಮತವಹುದು ತಪ್ಪಲ್ಲ ಪಾಂಡವ
ಗತಿಯನಱಿವಡೆ ಮಾರ್ಗವಿದು ಸ
ಮ್ಮತವು ನಿರ್ಮಲನೀತಿಕಾಱರ ಮತಿಗೆ ಮನೆಯಹುದು।
ಅತಿಗಳಿತವಾಯ್ತವಧಿ ದಿವಸ
ಸ್ಥಿತಿಗಳೈದಾಱಾಗೆ ಬಳಿಕೀ
ಕ್ಷಿತಿಗೆ ಪಾಂಡವರುತ್ತರಾಯಿಗಳೆಂದನಾ ಭೀಷ್ಮ॥ ೧೧

ಬಿಡು ನಡೆಯಲಿ ಮುಂದೆ ಮತ್ಸ್ಯನ
ನಾಡೊಳಗೆ ಕಟಕದಲಿ ದೂತರು
ಕೂಡೆ ಸಾಱಲಿ ಕರೆಯಲಕ್ಷೋಹಿಣಿಯ ನಾಯಕರ ।
ಜೋಡಿಸಲಿ ಗುಡಿಗಟ್ಟಿ ಪೆಂಡೆಯ
ಗೂಡಿ ಕೊಟ್ಟಿಗೆ ಬಂಡಿ ನಡೆಯಲಿ
ನಾಡಬಿಟ್ಟಿಗಳೆಂದು ಕೌರವರಾಯ ನೇಮಿಸಿದ ॥ ೧೨
ಹರಿದುದೋಲಗ ಮಱುದಿವಸ ಗುಡಿ
ಹೊಱಗೆ ಹೊಯ್ದವು ಸನ್ಮುಹೂರ್ತದ
ಲರಸ ಹೊಱವಂಟನು ಸುಶರ್ಮಾದಿಗಳ ಗಡಣದಲಿ ।
ಸುರನದೀಸುತಕರ್ಣಕೃಪಗುರು
ಗುರುಸುತಾದಿಮಹಾಪ್ರಧಾನರು
ಕರಿತುರಗರಥಪತ್ತಿಯಲಿ ಹೊಱವಂಟರೊಗ್ಗಿನಲಿ ॥ ೧೩
ಆರತಿಯನೆತ್ತಿದರು ಬಳಿಕ
ಪ್ಪಾರತಿಯ ಸೂಸಿದರು ಘನಮದ
ವಾರಣದ ಗದ್ದುಗೆಯೊಳಗೆ ಕುರುರಾಯ ಕುಳ್ಳಿರಲು ।
ಸಾರಿದರು ಭಟ್ಟರು ಕುರುಕ್ಷಿತಿ
ಧಾರುಣೀಶನ ಬಿರುದ ಮಿಗೆ ಕೈ
ವಾರಿಸುವ ಜಯರವದೊಡನೆ ನಿಸ್ಸಾಳ ಸೂಳವಿಸೆ ॥ ೧೪
ಹೊಗೆದುದಂಬರವವನಿ ನಡುಗಿತು
ಗಗನಮಂಡಲ ಪರಿವಿಡಿಯ ತಾ
ರೆಗಳು ಸೂಸಿತು ಸುರಿದವರುಣಾಂಬುವಿನ ಧಾರೆಗಳು ।
ದಿಗುವಳಯದಲಿ ಧೂಮಕೇತುಗ
ಳೊಗೆದವದುಭುತಭೂತಕೋಟಿಗ
ಳಗಲದಲಿ ಕಾಣಿಸಲು ಹಸ್ತಿನಪುರವ ಹೊಱವಂಟ ॥ ೧೫

ಎರಡು ಮೋಹರವಾಗಿ ತೆಂಕಲು
ಹರಿದು ತುರುಗಳ ತಡೆಯಿ ನಾವ್ರು
ತ್ತರದಲಾನುವೆವೆನುತ ನೃಪತಿ ತ್ರಿಗರ್ತರನು ಕಳುಹೆ ।
ಹುರಿಯೊಡೆದು ಹದಿನಾಱುಸಾವಿರ
ವರ ಮಹಾರಥರೊಗ್ಗಿನಲಿ ದು
ರ್ಧರಸುಶರ್ಮನು ಧಾಳಿಯಿಟ್ಟನು ತೆಂಕದಿಕ್ಕಿನಲಿ ॥ ೧೬
ಅಸಿತಪಕ್ಷಾಷ್ಟಮಿಯ ದಿನ ಸಂ
ಧಿಸಿದಡಾಳೆದ್ದುದು ವಿರಾಟನ
ಪಶುಸಮೂಹವ ಮುತ್ತಿದರು ಗೋಪಾಲಕರ ಕೆಡಹಿ ।
ಹೊಸಮುಖಕೆ ಸೀವರಿಸಿದವು ದೆಸೆ
ದೆಸೆಗೆ ಹಿಂಡುಗಳೊಡೆದು ಹಾಯ್ದುವು
ಮಸಗಿತಂಬಾರವದ ಕಳವಳವಾಯ್ತು ನಿಮಿಷದಲಿ ॥ ೧೭
ಆಳು ಸುತ್ತಲು ಕಟ್ಟಿ ತುಱುಗಳ
ಕೋಳವಿಡಿದರು ಬೊಬ್ಬಿಱಿದು ಗೋ
ಪಾಲರಾಂತರೆ ಕಾದಿದರು ಕಡಿಖಂಡಮಯವಾಗೆ ।
ಮೇಲೆ ಮೇಲ್ವೈತಪ್ಪ ಹೆಬ್ಬಲ
ದಾಳು ಕುದುರೆಯ ಕಂಡು ನೂಕದು
ಕಾಳಗವು ತಮಗೆನುತ ತಿರುಗಿತು ಗೋವರುಳಿದವರು ॥ ೧೮
ಮುಸುಕು ಕಂಬಳಿಗೋಲ ಕಲ್ಲಿಯ
ಬಿಸುಟು ಗಾಯದ ಗೋವರರು ಹೊ
ತ್ತುಸುವ ಕೊರಳಲಿ ಹಿಡಿದು ನಾಲಗೆಯೊಣಗಿ ಧಗೆಹೊಯ್ದು ।
ವಿಷಮರಣಭೀತಿಯಲಿ ಕಂದಿದ
ಮುಸುಡ ತೊದಲಿನ ನುಡಿಯ ಮರಣದ
ದೆಸೆಯ ಕೈಸನ್ನೆಗಳ ಕಾತರರೈದಿದರು ಪುರವ ॥ ೧೯

ಬಸಿವ ನೆತ್ತರ ಗೋವರರಸಂ
ಗುಸುರಲಾಱದೆ ಧೊಪ್ಪನಡೆಗೆಡೆ
ದಸುವ ಕಳೆದರು ಕೆಲರು ಕೆಲಬರು ತನುವ ಸಂತೈಸಿ।
ಅಸಮದಳವದು ಜೀಯ ಗೋವರ
ಕುಸುರಿದಱಿದರು ಹತ್ತು ಸಾವಿರ
ಪಶುಸಮೂಹವ ಹಿಡಿದರೆಂದರು ಮತ್ಸ್ಯ ಭೂಪತಿಗೆ ॥ ೨೦

ಕೇಳಿ ಬಿಸುಸುಯ್ದನು ವಿರಾಟನೃ
ಪಾಲನಿಂದಿನಲಳಿದನೇ ಕ
ಟ್ಟಾಳು ಕೀಚಕನೆಂದು ನೋಡಿದನಂದು ಕೆಲಬಲನ।
ಆಳು ಗಜಬಜಿಸಿತ್ತು ಹಾಯಿಕು
ವೀಳೆಯವನಿಂದೆನಗೆ ತನಗೆಂ
ದೋಲಗದೊಳಬ್ಬರಣೆ ಮುಸಗಿತು ಕದಡಿತಾಸ್ಥಾನ ॥ ೨೧

ಕೇಳಿ ಸಿಡಿಲೇಳಿಗೆಯಲೆದ್ದು ನೃ
ಪಾಲಕರು ಗಜಬಜಿಸೆ ರಭಸದೊ
ಳೋಲಗವ ಹೊಱವಂಟು ನಡೆದರು ಭಾಷೆಗಳಕೊಡುತ।
ಆಳು ಕೈದುವ ಕೊಂಡು ಕರಿಘಟೆ
ಮೇಳವಿಸಿ ಹಲ್ಲಣಿಸಿ ತೇಜಿಗ
ಳೋಳಿಯಲಿ ರಥ ಹೂಡಿ ಕವಿದುದು ಮತ್ಸ್ಯಪರಿವಾರ ॥ ೨೨

ಹೊಳಲ ಕಾಹಿಂಗುತ್ತರನ ಬೆಂ
ಬಳಿಗೆ ಕೆಲಬರನಿರಿಸಿ ಚಾತು
ರ್ಬಲಸಹಿತ ಹೊಱವಂಟು ನಡೆದನು ರಾಯನೊಗ್ಗಿಯಲಿ।
ನೆಲೆಯನಱಿವ ವಿಕರ್ಮದಲಿ ನ
ಮ್ಮಳವ ನೋಡಲು ಕೌರವರು ತುಱು
ಗಳನು ಹಿಡಿದರೆನುತ್ತ ಧರ್ಮಜನನುಜರಿಗೆ ನುಡಿದ ॥ ೨೩

ಇವರು ತಮ್ಮೊಳಗೆಂದರಿದು ನ
ಮ್ಮವರ ಬಲ ತುಱುಗೊಂಡವರು ಕೌ
ರವರು ನಮ್ಮ ಪರೀಕ್ಷೆಗೋಸುಗ ಬಂದ ಹದನಹುದು ।
ಅವಧಿ ತೀರದ ಮುನ್ನ ಕಾಣಿಸಿ
ನಮಗೆ ಮಗುಳಾರಣ್ಯವಾಸವ
ನವರು ಕರುಣಿಸ ಬಂದರೆಂದರು ಧರ್ಮಜಾನುಜರು॥ ೨೪

ಅವಧಿ ತೀರಲಿ ಮೇಣು ಮಾಣಲಿ
ನಮಗೆ ತುಱುಹುಯ್ಯಲನು ಕೇಳಿದ
ಶಿವಿಯೊಳುದಕವ ಕುಡಿದಡಾಪಾತಕವನೆಣಿಸುವಡೆ।
ಎವಗೆ ನೂಕದು ಸಾಕದಂತಿರ
ಲವರ ಬೆಂಬಳಿವಿಡಿದು ವರಗೋ
ನಿವಹವನು ಮರಳಿಚುವೆನೆಂದನು ಧರ್ಮನಂದನನು॥ ೨೫

ಬೀಳುಕೊಂಡುದು ನುಡಿದವಧಿಯಿ
ನ್ನಾಳುತನವನು ತೋಱಬೇಹುದು
ಕಾಲವನು ನೂಕಿದೆವು ಮಱೆದಿಹುದುಚಿತವಲ್ಲೆನುತ ।
ಕಾಳಗಕ್ಕನುವಾಗಿ ಪಾರ್ಥನ
ಮೇಲಣಾಹವಕಿರಿಸಿ ತಮ್ಮರು
ನಾಲುವರು ನಡೆದರು ವಿರಾಟನ ಕೂಡೆ ಬಲವಾಗಿ॥ ೨೬

ತೂಳುವಱೆಗಳ ಲಗ್ಗೆಯಲಿ ಕೆಂ
ಧೂಳಿ ಮುಸಗಿ ವಿರಾಟಭೂಪತಿ
ಯಾಳು ಕವಿದರೆ ಕೊಂಡು ಸೈರಿಸಿ ತಱುವ ಹಿಂದಿಕ್ಕಿ।
ಕಾಳಗವ ಕೊಟ್ಟರು ಛಡಾಳಿಸಿ
ಸೂಳವಿಸೆ ನಿಸ್ಸಾಳ ದಿಕ್ಕಿನ
ಮೂಲೆ ಬಿರಿಯೆ ವಿರಾಟಬಲ ಹಳಚಿದುದು ಪರಬಲವ॥ ೨೭

ಘಡ ವಿರಾಟನ ಚುಕ್ಕಿಗಳಿರವ
ಗಡಿಸದಿರಿ ಸಾಯದಿರಿ ಬಿರುದರ
ಹೆಡತಲೆಯ ಹಾವಾದ ಕೀಚಕನಳಿದನಿನ್ನೇನು।
ಮಿಡುಕಿ ಕಟಕವ ಹೊಕ್ಕು ನರಿ ಹಲು
ಬಿಡುವವೊಲು ವಿರಾಟ ಕೆಟ್ಟನು
ಕಡೆಗೆನುತ ಕೈಹೊಯ್ದು ನಕ್ಕದು ಕೂಡೆ ಕುರುಸೇನೆ॥ ೨೮
ಕುದುರೆ ಹೊಕ್ಕವು ದಂತಿಘಟೆ ತೂ
ಳಿದವು ರಥವಾಜಿಗಳು ಸೇನೆಯ
ಹೊದಱ ಹೊಯ್ದವು ಕೂಡೆ ಕಾಲಾಳಿಱಿದು ಕಾದಿದರು।
ಎದೆಯ ನಟ್ಟವು ಬಾಣ ಕೆಲಬರ
ಬಿದಿಯೊಡೆದು ಕರುಳೊಕ್ಕು ನೆತ್ತಿಯ
ಮಿದುಳು ಸುರಿದುದು ನೆತ್ತರುಬ್ಬರಿಸಿತ್ತು ನೊರೆ ಮಸಗಿ॥ ೨೯
ಚೂಣಿ ಮುಱಿದುದು ಕಲಿವಿರಾಟನು
ಕೇಣವಿಲ್ಲದೆ ಕಾದಿದನು ಕೈ
ಗೋಣು ಕುಣಿದಾಡಿದವು ರಕುತದ ಕಡಲ ತೆರೆಯೊಳಗೆ।
ಹೂಣಿಗರು ಕಡಿವಡೆಯೆ ಕದನದ
ಜಾಣರನು ಮೂದಲಿಸಿ ಬಿರುಬಿನ
ಕೇಣದಲಿ ನಗುತಾಸುಶರ್ಮಕ ಮತ್ತೆ ಕೋಪದಲಿ॥ ೩೦
ಬಲ ಮುಱಿದು ಬರುತಿರಲು ಖಾತಿಯ
ತಳೆದು ವೀರಸುಶರ್ಮನಂಬಿನ
ಮಳೆಯ ಕಱೆಯುತ ರಿಪುವಿರಾಟನ ರಥವ ತಱುಬಿದನು।
ಎಲವೊ ಘಡ ಘಡ ಮತ್ಸ್ಯ ಹುಲುಮಂ
ಡಳಿಕ ನಿನಗೇಕಾಳುತನವೆಂ
ದುಲಿದು ಕೈಕೊಂಡೆಚ್ಚು ಕಾದಿದನಾ ವಿರಾಟನಲಿ॥ ೩೧

ಸರಳು ತೀರಲು ಕಿತ್ತು ಸುರಗಿಯು
ತಿರುಹಿ ತಿವಿದಾಡಿದರು ಮುಱಿದರೆ
ಪರಿಘದಲಿ ಕಾದಿದರು ಹೊಕ್ಕರು ಹಲಗೆ ಖಡುಗದಲಿ।
ಬೆರಸಿ ಹೊಯಿದಾಡಿದರು ಮತ್ಸ್ಯನ
ಭರವ ಹೊಗಳುತ ಕಲಿಸುಶರ್ಮಕ
ನುರುವಣಿಸಿವನು ಗಾಯವಡೆದು ವಿರಾಟನನು ಹಿಡಿದ॥ ೩೨
ಸಿಕ್ಕಿದನು ದೊರೆಯೊಪ್ಪುಗೊಟ್ಟರು
ಚ ಕ್ಕಿಗಳು ಕೀಚಕನ ನೆಳಲಿರೆ
ಸಿಕ್ಕಲೀಸುವನೇ ವಿರಾಟನನೆನುತ ಬಲ ಬೆದಱೆ।
ಉಕ್ಕಿದಾತನ ಹೆಗಲು ಬೇವುದು
ಮಕ್ಕಳಾಟಿಕೆಯಾಯ್ತು ತಾವ್ ಕೈ
ಯಿಕ್ಕಬೇಕೆಂದೊದಱಿದರು ಮತ್ಸ್ಯನ ಸಹೋದರರು॥ ೩೩
ಹೂಣೆ ಹೊಕ್ಕು ವಿರಾಟ ಕಾಳಗ
ದಾಣೆ ಕೇಣವನಱಿಯದೊಬ್ಬನೆ
ಚೂಣಿಯಲಿ ಸಿಕ್ಕಿದನು ದೊರೆ ಹಿಡಿವಡೆದನೆನೆ ಸೇನೆ।
ಪ್ರಾಣ ಕೊರಳಲಿ ನಿಲಲು ರಣಬಿ
ನ್ನಾಣೆಗರು ಜವಗುಂದೆ ಭಂಗವ
ಕಾಣಲಾಱದೆ ಧರ್ಮಸುತ ಭೀಮಂಗೆ ತೋಱಿಸಿದ॥ ೩೪
ಬಲವನಾಯಕವಾಯ್ತು ಮತ್ಸ್ಯನ
ಕುಲಕೆ ಬಂದುದು ಕೇಡು ಸುಮ್ಮನೆ
ನಿಲುವುದನುಚಿತ ಭೀಮ ಬಿಡಿಸು ವಿರಾಟಭೂಪತಿಯ।
ಗೆಲವು ಪರಬಲಕಾದುದೆನೆ ರಿಪು
ಬಲದವಾನಲನಣ್ಣನಾಜ್ಞೆಯ
ತಲೆಯೊಳಾಂತನು ಮುಂದಣಾಲದ ಮರನ ನೋಡಿದನು॥ ೩೫

ಹೆಮ್ಮೆರನನಿದ ಕಿತ್ತು ವೈರಿಸು
ಶರ್ಮಕನ ನೊರಸುವೆನು ಹರಿಬದೊ
ಳೊಮ್ಮೆದರೆ ಮೋಹರವನರೆವೆನು ಜೀಯ ನೋಡೆನಲು।
ತಮ್ಮ ಸೈರಿಸು ಮರನ ಮುಱಿಯದಿ
ರೆಮ್ಮ ಮಾತನು ಕೇಳು ಹೊಲ್ಲೆಹ
ವೆಮ್ಮ ತಾಗದೆ ಮಾಣದೆಂದನು ಧರ್ಮನಂದನನು॥ ೩೬
ಮರನ ಮುಱಿದರೆ ನಮ್ಮನಱಿವನು
ಕುರುಕುಲಾಗ್ರಣಿ ಈಯಮಾನುಷ
ಪರಮಸಾಹಸ ಭೀಮಸೇನಂಗಲ್ಲದಿಲ್ಲೆಂದು ।
ಅಱಿಕೆಯಹುದನೆ ಭೀಮನೆಂದನು
ಕುರುಕುಲಾಗ್ರಣಿ ಸಹಿತಿದೆಲ್ಲವ
ನೊರಸಿ ಕಳೆದರೆ ಬಳಿಕ ನಮಗಾರುಂಟು ಮುನಿವವರು ॥ ೩೭
ಉಗ್ರಕರ್ಮವ ನೆನೆಯಬೇಡ ಮ
ಹೋಗ್ರದಲಿ ಸಾಧಿಸಿದೆವವಧಿಸ
ಮಗ್ರವನು ಸಾಕಿನ್ನು ಬಿಡಿಸು ವಿರಾಟಭೂಪತಿಯ ।
ವಿಗ್ರಹವ ಜಯಿಸೆನಲು ರಿಪುಕುಲ
ದಗ್ರಿಯನು ಬೆಂಬತ್ತಿ ವಿಲಯಮ
ಹೋಗ್ರಸನ್ನಿಭನರೆದನಿಭಹಯರಥಪದಾತಿಗಳ॥ ೩೮
ಸರಳ ಸಾವಿರದೆಂಟುಸಾವಿರ
ತುರಗವನು ಸೀಳಿದನು ಕರಿಗಳ
ನೆರವಿಯೈನೂಱೊಂತು ಮುಱಿದನು ತೇರುಸಾವಿರವ ।
ಅರಿಪದಾತಿಯ ಲಕ್ಷಸಂಖ್ಯೆಯ
ನೊರಸಿದನು ಬೆಂಬತ್ತಿ ಬಿಡಬಿಡು
ದೊರೆವಿರಾಟನನೆನುತ ಹಿಡಿದನು ಕಲಿಸುಶರ್ಮಕನ॥ ೩೯

ಎಲವೆಲವೊ ಕಲಿ ವಲಲ ನಮ್ಮನು
ಸಲಹಿದವನಲ್ಲಾ ವಿರಾಟನು
ಸಿಲುಕಿದನು ದಾತಾರನವಸರಕೊದಗಬೇಹುದೆನೆ ।
ಉಲಿದು ಕೈಕೊಂಡಟ್ಟಿದುದು ರಿಪು
ಬಲವ ತತ್ತಳದುಳಿಯೆ ಕವಡಿಕೆ
ಯೊಳಗೆ ಕಲುಬಿದ್ದಂತೆ ಕೆದಱಿತು ವೈರಿಪಾಯಿದಳ॥ ೪೦

ಪಶುವ ಬಿಡು ಬಿಡು ಮಾರಿ ಕೆರಳಿದ
ಮುಸಕವಾಯಿತು ವಿರಾಟಭೂಪನ
ಗಸಣಿ ಬೇಡೆನುತಾ ಸುಶರ್ಮಕ ರಥವ ತಿರುಹಿದನು ।
ಅಸಮರಣದಲಿ ಭಟರು ಕೈದುವ
ಬಿಸುಟು ಬದುಕಿದೆವೆಂದು ತಲೆಯನು
ಹೊಸೆವ ತವಕದಿ ಜುಣುಗೆ ತೆಗೆದನು ಭೀಮನಾಹವನ॥ ೪೧

ವಲಲ ಮೆಚ್ಚಿದೆನೈ ಮಹಾದೇ
ವಲಘು ಭುಜಬಲ ನನ್ನ ಬಿಡಿಸಿದೆ
ಸಿಲುಕಿದೆನು ಹಗೆಗೆಂದು ಬೋಳೈಸಿದನು ಮತ್ಸ್ಯನೃಪ।
ಬಳಿಕ ಯಮನಂದನನು ಬಿಡಿಸಿದ
ಕಲಿಸುಶರ್ಮನನಿರುಳು ಕಾಳಗ
ದೊಳಗೆ ತುಱು ಮರಳಿದವು ಗೆಲಿದರು ಪಾಂಡುನಂದನರು ॥೪೨

ಮಾನಭಂಗದ ಮೇಲೆ ಕೌರವ
ಸೇನೆ ಸರಿಯೆ ಸುಶರ್ಮ ಕಡು ದು
ಮ್ಮಾನದಲಿ ತಲೆಮುಸುಕಿನಲಿ ತಿರುಗಿದನು ಪಾಳಯಕೆ।
ಭಾನು ಭುವನದ ನಯನಮುದ್ರಾ
ಮೌನಮುದ್ರೆಯ ಮುಱಿಯಲುತ್ತರ
ಕ್ಷೋಣಿಯಲಿ ಗೋಗ್ರಹಣವನು ಮಾಡಿದನು ಕುರುರಾಯ॥೪೩

## ೫. ಪಾರ್ಥ ಮೈದೋರಿದನು ಪರಬಲಕೆ

ಕೇಳು ಜನಮೇಜಯ ಸುಯೋಧನ
ನಾಳು ಮುತ್ತಿತು ತುಱುಗಳನು ಮೇ
ಲಾಳು ಕವಿದುದು ಭೀಷ್ಮ ಕರ್ಣ ದ್ರೋಣ ಮೊದಲಾಗಿ ।
ಕೋಲ ಸೂಟಿಯ ಸರಿವಳೆಗೆ ಗೋ
ಪಾಲ ಪಡೆ ಮುಗ್ಗಿದುದು ಗೋವರ
ಸಾಲ ಹೊಯ್ದರು ಕರ್ಣ ದುಶ್ಯಾಸನ ಜಯದ್ರಥರು ॥ ೧

ಮೇಲುದಳಕಿದಿರಾಗಿ ತುಱುವರಿ
ಗಾಳಗದೊಳೊಡೆಮುಗ್ಗಿ ಗೋವರು
ಧೂಳಿಗೋಟೆಯ ಕೊಂಡರಮರರ ರಾಜಧಾನಿಯನು ।
ಸಾಲೊಡೆದು ಥಟ್ಟೊಡ್ಡಿದರು ಗೋ
ಪಾಲನೊಬ್ಬನ ಹಿಡಿದು ಮೂಗಿನ
ಮೇಲೆ ಸುಣ್ಣವ ಬರೆದುಬಿಟ್ಟರು ಹಗೆಯ ಪಟ್ಟಣಕೆ ॥ ೨

ಬೆಗಡು ಮುಸುಕಿದ ಭೀತಿ ಹೆಚ್ಚಿದ
ಢಗೆಯ ಹೊಯ್ವಳ್ಳೆಗಳ ತುದಿನಾ
ಲಗೆಯ ತೊದಲಿನ ನುಡಿಯ ಬಿಱುಬಿನ ಬಱತ ತಾಳಿಗೆಯ ।
ಅಗಿವ ಹುಯ್ಯಲುಗಾಱನೊಡ್ಡೋ
ಲಗಕೆ ಬಂದನು ನೃಪವಿರಾಟನ
ಮಗನ ಕಾಲಿಂಗೆಱಗಿದನು ದೂಱಿದನು ಕಳಕಳವ ॥ ೩

ಏಳು ಮನ್ನೆಯಗಂಡನಾಗು ನೃ
ಪಾಲ (ಕೌರವರಾಯ ತುಱುಗಳ
ಕೋಳುವಿಡಿದನು ಸೇನೆ ಬಂದುದು ಧರಣಿಯುಗಲದಲಿ।)
ಧಾಳಿ ಬರುತಿದೆ ಕರಸಿಕೊಳು ನಿ
ನ್ನಾಳು ಕುದುರೆಯ ರಾಣಿವಾಸದ
ಗೂಳೆಯವ ತೆಗೆಸೆಂದು ನುಡಿದನು ಬಿನ್ನಹದ ಬಿಱುಬ॥ ೪

ಏನೆಲವೊ ತುದಿಮೂಗಿನಲಿ ಬಿಳು
ಪೇನು ಢಗೆ ಹೊಯ್ದೇಕೆ ಬಂದೆ ಇ
ದೇನು ನಿನ್ನಿನ ರಣವನಯ್ಯನು ಗೆಲಿದುದೇನಾಯ್ತು।
ಏನು ಭಯ ಬೇಡಿನ್ನು ಕಲಹ ನಿ
ಧಾನವಾರ್ತೆಯದೇನೆನಲು ಕುರು
ಸೇನೆ ಬಂದುದು ತುಱುವ ಹಿಡಿದರು ಬಡಗದಿಕ್ಕಿನಲಿ॥ ೫

ಎತ್ತ ದೂವಾಳಿಸುವಡಾಲಿಗ
ಳತ್ತಲಾನೆಯ ಥಟ್ಟು ಕಾಲಾ
ಳೊತ್ತರದ ರಥವಾಜಿ ರೂಢಿಯ ರಾಯರಾವುತರು।
ಸುತ್ತಬಳಸಿಹುದೆತ್ತ ಮನ ಹರಿ
ವತ್ತ ಮೋಹರವಲ್ಲದನ್ಯವ
ಮತ್ತೆ ಕಾಣೆನು ಜೀಯ ಹದನಿದು ವೈರಿವಾಹಿನಿಯ॥ ೬

ಒಳಗೆ ನೀ ಕಾದುವಡೆ ದುರ್ಗವ
ಬಲಿಸು ಹರಿಬಕೆ ಹಿಂದುಗಳೆಯದೆ
ಮಲೆವ ಮನ ನಿನಗೀಗಳುಂಟೇ ನಡೆಯಬೇಕೆನಲು।
ಕೆಲಬಲನ ನೋಡಿದನು ಮೀಸೆಯ
ನಲುಗಿದನು ತನ್ನಿದಿರ ಮೇಳದ
ಲಲನೆಯರ ಮೊಗ ನೋಡುತುತ್ತರ ಬಿರುದ ಕೆದಱಿದನು॥ ೭

ನೂಕು ಕುನ್ನಿಯನಾಹವದ ಭೀ
ತಾಕುಲನ ತಾನೀಗ ಹೆಂಡಿರ
ಸಾಕಿ ಬದುಕುವ ಲವಲವಿಕೆಯಲಿ ಜಾಱಿ ಬಂದೀಗ |
ಕಾಕ ಬಳಸುವನಿವನು ನಾನು
ದ್ರೇಕಿಸಲು ಸಮರಲಿ ನಿಲುವರೆ
ನಾಕದವರಿಗೆ ನೂಕದೆಂದನು ಸತಿಯರಿದಿರಿನಲಿ || ೮
ಎನಿತು ಬಲ ಘನವಾದಡೇನದು
ನಿನಗೆ ಗಹನವೆ ಜೀಯ (ಜಗದಲಿ
ದಿನಪನಿದಿರಲಿ ದಿಟ್ಟತನವೇ ತಮದ ಗಾವಳಿಗೆ)
ಬಿನುಗುರಾಯರ ಬಿಂಕ ಗೋವರ
ಮೊನೆಗೆ ಮೆಱೆವಡೆ ಸಾಕು ನಿಂದಿರು
ಜನಪ ತೋಱಿಸು ಕೈಗುಣವ ಕೌರವನ ಥಟ್ಟಿನಲಿ || ೯
ಎಂದಡುಬ್ಬರಿಸಿದನು ತಾ ಕಲಿ
ಯೆಂದು ಬಗೆದನು ಮೀಸೆಯನು ಬೆರ
ಳಿಂದ ತಿರುಹುತ ಮೊಳೆನಗೆಯು ಮೌಳಿಯಲಿ ಮೈಮುರಿದು |
ಸಂದಣಿಸೆ ರೋಮಾಂಚ ಕೆಲಬಲ
ದಿಂದುಮುಖಿಯರ ನೋಡಿದನು ನಲ
ವಿಂದ ನುಡಿದನು ತನ್ನ ಪೌರುಷತನದ ಪರಿಣತಿಯ || ೧೦
ಹಿಡಿದು ರಾಜ್ಯವ ಕೊಂಡು ಹೆಂಗುಸ
ಬಡಿದು ಪಾಂಡವರಾಯರನು ಹೊಱ
ವಡಿಸಿ ಕೊಬ್ಬಿದ ಭುಜಬಲವನೆನ್ನೊಡನೆ ತೋಱಿದನೆ |
ಬಡಯುಧಿಷ್ಠಿರನೆಂದು ಬಗೆದನೆ
ಕಡುಗಿದಡೆ ಕೌರವನ ಕೀರ್ತಿಯ
ಹೊಡೆವೆನಱಿಯನಲಾ)ಎನುತ ಸುಕುಮಾರ ಖತಿಗೊಂಡ|| ೧೧

(ಜವನ ಮೀಸೆಯ ಮುರಿದನೋ) ಭೈ
ರವನ ದಾಡೆಯನಲುಗಿದನೊ ಮೃ
ತ್ಯುವಿನ ಮೇಲುದ ಸೆಳೆದನೋ ಕೇಸರಿಯ ಕೆಣಕಿದನೋ।
ಬವರವನು ತೊಡಗಿದನಲಾ ಕೌ
ರವನಕಟ ಮರುಳಾದನೆಂದಾ
ಯುವತಿಯರ ಮೊಗನೋಡುತುತ್ತರ ಬಿರುದ ಕೆದಱಿದನು॥ ೧೨
ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕೆಲರಧಮಕುಲದಲಿ ಸಂದು ಬಂದವರು।
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟವರೊಳೆಂದು ಕು
ಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ॥ ೧೩
ಪೊಡವಿಪತಿಗಳು ಬಂದು ತುಱುಗಳ
ಹಿಡಿವರೇ ಲೋಕದಲಿ ಅಧಮರ
ಬಡಮನದ ಮನ್ನೆಯರ ವೈಸಿರಿ ಕೌರವನೊಳಾಯ್ತು।
ಕಡೆಗೆ ದುರ್ಯಶವುಳಿವುದಲ್ಲದೆ
ಬಿಡುವೆನೇ (ಗೋಧನವನೆನ್ನೊಳು
ತುಡುಕಿ ಬದುಕುವನಾವನೆಂದನು) ಖಂಡೆಯವ ಜಡಿದು॥ ೧೪
ಖಳರ ಮುಱಿವೆನು ಹಸ್ತಿನಾಪುರ
ದೊಳಗೆ ಠಾಣಾಂತರವನಿಕ್ಕುವೆ
ತೊಲಗಿಸುವೆ ಕೌರವನ ಸೇನೆಯ ಧೂಳಿಪಟ ಮಾಡಿ।
ಗೆಲವ ತಹೆನೆಂದುತ್ತರನು ಕೋ
ಮಲೆಯರಿದಿರಲಿ ಬಾಯ್ಗೆ ಬಂದುದ
ಗಳಹುತಿರ್ದನು ಬೇಕುಬೇಡೆಂಬವರ ನಾ ಕಾಣೆ॥ ೧೫

ನುಡಿದು ಫಲವೇನಿನ್ನು (ಸಾರಥಿ
ಮಡಿದ ನಿನ್ನಿನ ಬವರದಲಿ) ನಾ
ಮುಡುಹನಾದೆನು ಶಿವಶಿವಾ ಇಂದೆನ್ನ ಕೈಮನಕೆ ।
ಗಡಣಿಸುವ ಸಾರಥಿಯನೊಬ್ಬನ
ಪಡೆದೆನಾದರೆ ಕೌರವೇಂದ್ರನ
ಪಡೆಗೆ ಹಬ್ಬವ ಮಾಡುವೆನು ತೋಱುವೆನು ಕೈಗುಣವ॥ ೧೬
ಕೇಳಿದನು ಕಲಿ ಪಾರ್ಥನೀತನ
ಬಾಲಭಾಷೆಗಳೆಲ್ಲವನು ಪಾಂ
ಚಾಲೆಗೆಕ್ಕಟ ನುಡಿದನಾವಿನ್ನಿಹುದು ಮತವಲ್ಲ ।
ಕಾಲ ಸವೆದುದು ನಮ್ಮ ರಾಜ್ಯದ
ಮೇಲೆ ನಿಲುಕಲು ಬೇಕು (ಕೌರವ
ರಾಳು ನಮಗೋಸುಗವೆ ಬಂದುದು) ಕಾಂತೆ ಕೇಳೆಂದ॥ ೧೭
ನರನ ಸಾರಥಿಯೆಂದು ನೀನು
ತ್ತರೆಗೆ ಸೂಚಿಸಿ ನನ್ನನೀಗಳೆ
ಕರಸೆನಲು ಕೈಕೊಂಡು ದುರುಪದಿ ಬಂದಳೊಲವಿನಲಿ !
(ತರುಣಿ ಕೇಳರ್ಜುನನ ಸಾರಥಿ
ವರ ಬೃಹಂದಳೆ ಖಾಂಡವಾಗ್ನಿಯ
ಹೊರೆದ ಗಡ ತಾನೆಂದು) ಸತಿಯುತ್ತರೆಗೆ ಹೇಳಿದಳು॥ ೧೮
ಕೇಳಿ ಹರುಷಿತೆಯಾದಳುತ್ತರೆ
ಯೋಲಗಕೆ ಬಂದಣ್ಣನಂಘ್ರಿಗೆ
ಲೋಲಲೋಚನೆಯೆಱಗಿ ಕೈಮುಗಿದೆಂದಳೀ ಹದನ।
ಕೇಳಿದೆನು ಸಾರಥಿಯ ನೆಲೆಯನು
ಕಾಳಗಕೆ ನಡೆಯಣ್ಣ ದೇವ ನೃ
ಪಾಲಕರ ಜಯಿಸೆಂದಡುತ್ತರ ನಗುತ ಬೆಸಗೊಂಡ॥ ೧೯

ತಂಗಿ ಹೇಳೌ ತಾಯೆ ನಿನಗೀ
ಸಂಗತಿಯನಾರಱುಹಿದರು ಬಳಿ
ಕಂಗವಣೆಯುಳ್ಳವನೆ ಸಾರಥಿತನದ ಕೈಮೆಯಲಿ।
ಮಂಗಳವಲಾ ಬಳಿಕ ರಣದೊಳ
ಭಂಗನಹೆ ನಿನ್ನಾಣೆ ತನ್ನಯ
ತುಂಗವಿಕ್ರಮತನವನುಳುಹಿದೆ ಲೇಸು ಲೇಸೆಂದ॥ ೨೦
ಎಂದಳೀ ಸೈರಂಧ್ರಿ ಸುರಪನ
ನಂದನವ ಸುಡುವಂದು ಪಾರ್ಥನ
ಮುಂದೆ ಸಾರಥಿಯಾದ ಗಡ ನಾವಱಿಯೆವೀ ಹವನ।
ಹಿಂದುಗಳೆಯದೆ ಕರಸು ನಮ್ಮ ಬೃ
ಹಂದಳೆಯನೆನೆ ನಗುತ ಲೇಸಾ
ಯ್ತೆಂದು ಪರಮೋತ್ಸಾಹದಲಿ ಸೈರಂಧ್ರಿಗಿಂತೆಂದ॥ ೨೧
ಸಾರಥಿಯ ಕೊಟ್ಟೆನ್ನನುಳುಹಿದೆ
ವಾರಿಜಾನನೆ ಲೇಸ ಮಾಡಿದೆ
ಕೌರವನ ತನಿಗರುಳ ತೆಗೆವೆನು ತಡವ ಮಾಡಿಸದೆ।
ನಾರಿ ನೀನೇ ಹೋಗಿ ಪಾರ್ಥನ
ಸಾರಥಿಯ ತಾಯೆನಲು ನಮ್ಮನು
ವೀರ ಬಗೆಯನು ನಿಮ್ಮ ತಂಗಿಯ ಕಳುಹಿ ಕರಸುವುದು॥ ೨೨
ತಾಯೆ ನೀನೇ ಹೋಗಿ ಸೂತನ
ತಾಯೆನಲು ಕೈಕೊಂಡು ಕಮಲದ
ಳಾಯತಾಕ್ಷಿ ಮನೋಭವನ ಮಱಿಯಾನೆಯಂದದಲಿ।
ರಾಯಕುವರಿ ನವಾಯಿಗತಿಗರು
ವಾಯಿಯಲಿ ಬರೆ ಜನರ ಕರಣದ
ಲಾಯ ತೊಡಕಿತು ತೆಗೆದಳಂಗನೆ ಜನರ ಕಣ್ಮನವ॥ ೨೩

ಬರವ ಕಂಡನು ಪಾರ್ಥನೇನು
ತ್ತರೆ ಕುಮಾರಿ ಕಠೋರಗತಿಯಲಿ
ಬರವು ಭಾರಿಯು ರಾಜಕಾರ್ಯವ ಸೂಚಿಸುವುವೆನಗೆ।
ಬರವು ಬೇಡಿಲ್ಲಿನ್ನ ಮಾತನು
ಹುರುಳುಗೆಡಿಸದೆ ಸಲಿಸುವರೆ ನಿಮು
ಗಱುಹಿದಪೆನೆನೆ ಮೀಜಬಲ್ಲನೆ ಮಗಳೆ ಹೇಳೆಂದ॥ ೨೪
ನೆರೆದು ಬಂದರು ಹಸ್ತಿನಾಪುರ
ದರಸುಗಳು ಹೊಲನೊಳಗೆ ಶತಸಾ
ವಿರದ ತುಱುಗಳ ಹಿಡಿದರಳಿದುದು ಗೋಪಪಡೆ ಕಾದಿ।
ಮರಳಿಚುವರೆಮ್ಮಣ್ಣದೇವಗೆ
ಧುರಕೆ ಸಾರಥಿಯಿಲ್ಲ ನೀವಾ
ನರನ ಸಾರಥಿಯೆಂದು ಕೇಳಿದೆನೆಂದಳಂದುಮುಖಿ॥ ೨೫
ಇನ್ನು ನೀವೇ ಬಲ್ಲಿರೆನೆ ನಾ
ನಿನ್ನ ಮಾತನು ಮಿಾಜಬಲ್ಲೆನೆ
ಮುನ್ನ ಸಾರಥಿಯಹೆನು ನೋಡುವೆನೆನುತ ವಹಿಲದಲಿ।
ಬೆನ್ನಲಬಲೆಯನೈದಿ ಬರೆ ಸಂ
ಪನ್ನಬಲನೋಲಗಕೆ ನಿಜ ಹರು
ಷೋನ್ನತಿಯಲುತ್ತರಕುಮಾರಕ ಕರೆದು ಮನ್ನಿಸಿದ॥ ೨೬
ಎಲೆ ಬೃಹಂದಳೆ ತತ್ತುದಿನಗ
ಗ್ಗಳಯರೊಳು ವಿಗ್ರಹವು ಸಾರಥಿ
ಯಳಿದನೆನ್ನವ ನೀನು ಸಾರಥಿಯಾಗಿ ಸಮರದಲಿ।
ಉಳುಹಬೇಹುದು ನೀ ಸಮರ್ಥನು
ಫಲುಗುಣನ ಸಾರಥಿಯಲೇ ನೀ
ನೊಲಿದು ಮೆಚ್ಚಲು ಕಾದಿ ತೋಱುವೆನಹಿತಸೇನೆಯಲಿ॥ ೨೭

ಭರತವಿದ್ಯಾವಿಷಯದಲಿ ಸಲೆ
ಪರಿಚರಿಯ ನಮಗಲ್ಲದೀ ಸಂ
ಗರದ ಸಾರಥಿತನವ ಮಱೆದೆವು ಹಲವು ಕಾಲದಲಿ।
ಅರಿಭಟರು ಭೀಷ್ಮಾದಿಗಳು ನಿಲ
ಲರಿದು ಸಾರಥಿತನದ ಕೈಮನ
ಬಱಡರಿಗೆ ದೊರೆಕೊಂಬುದೇ ರಣ ಸೂಱೆಯಲ್ಲೆಂದ॥ ೨೮
ಆನಿರಲು ಭೀಷ್ಮಾದಿಗಳು ನಿನ
ಗೇನ ಮಾಡಲು ಬಲ್ಲರಳುಕದೆ
ನೀನು ನಿಲು ಸಾಕೊಂದು ನಿಮಿಷಕೆ ಗೆಲುವೆನನಿಬರನು।
ತಾನದಾರೆಂದಱೆಯಲಾ ಗುರು
ಸೂನು ಕರ್ಣ ದ್ರೋಣರೆಂಬವ
ರಾನಱೆಯದವರಲ್ಲ ಸಾರಥಿಯಾಗು ಸಾಕೆಂದ॥ ೨೯
ವೀರನಹೆ ಬಳಿಕೇನು ರಾಜಕು
ಮಾರನೆಱೆವಡೆ ಹರಿಯುವಲ್ಲಾ
ಸಾರಥಿತ್ವವ ಮಾಡಿ ನೋಡುವ ರಥವ ತರಿಸೆಂದು।
ವಾರುವದ ಮಂದಿರದೊಳಾಯಿದು
ಚಾರುತುರಗಾವಳಿಯ ಬಿಗಿದನು
ತೇರ ಸಂವರಿಸಿದನು ರಥವೇಱೆದನು ಕಲಿಪಾರ್ಥ॥ ೩೦
ಮಂಗಳಾರತಿಯೆತ್ತಿದರು ನಿಖಿ
ಳಾಂಗನೆಯರುತ್ತರಗೆ ನಿಜಸ
ರ್ವಾಂಗ ಶೃಂಗಾರದಲಿ ಹೊಳೆಯುತ ಬಂದು ರಥವೇಱೆ।
ಹೊಂಗೆಲಸಮಯ ಕವಚವನು ಪಾ
ರ್ಥಂಗೆ ಕೊಟ್ಟನು ಜೋಡು ಸೀಸಕ
ವಂಗದೊಳಗಳವಡಲು ರಾಜಕುಮಾರನನುವಾದ॥ ೩೧

ನರನು ತಲೆಕೆಳಗಾಗಿ ಕವಚವ
ಸರಿಯುತಿರೆ ಘೊಳ್ಳೆಂದು ಕೈಹೊ
ಯ್ದರಸಿಯರು ನಗೆ ನಾಚಿದಂತಿರೆ ಪಾರ್ಥ ತಲೆವಾಗಿ।
ತಿರುಗಿ ಮೇಲ್ಮೊಗವಾಗಿ ತೊಡಲು
ತ್ತರೆ ಬಳಿಕ ನಸುನಗಲು ಸಾರಥಿ
ಯಱಿಯ ತಪ್ಪೇನೆನುತಲುತ್ತರ ತಾನೆ ತೊಡಿಸಿದನು॥ ೩೨
ಕವಚವನು ತೊಡಲಱಿಯದವನಾ
ಹವಕೆ ಸಾರಥಿತನವ ಮಾಡುವ
ಹವಣು ತಾನೆಂತೆನುತಲಿದ್ದರು ನಿಖಿಳನಾರಿಯರು।
ಬವರವನು ನಮ್ಮಣ್ಣ ಗೆಲಿದಪ
ನವರ ಮಣಿಪರಿಧಾನವಾಭರ
ಣವನು ಸಾರಥಿ ಕೊಂಡು ಬಾ ಎಂದಳು ಸರೋಜಮುಖಿ॥ ೩೩
ನಸುನಗುತ ಕೈಕೊಂಡನರ್ಜುನ
ನೆಸಗಿವನು ರಥವನು ಸಮೀರನ
ಮಿಸುಕಲೀಯದೆ ಮುಂದೆ ಮಿಕ್ಕವು ವಿಗಡವಾಜಿಗಳು।
ಹೊಸ ಪರಿಯ ಸಾರಥಿಯಲಾ ನಮ
ಗಸದಳವು ಸಂಗಾತ ಬರಲೆಂ
ದುಸುರದುಳಿದುದು ಹಿಂದೆ ಪುರದಲಿ ಚಾತುರಂಗಬಲ॥ ೩೪
ಎಲೆ ಪರೀಕ್ಷಿತತನಯ ಕೇಳ್ ನೃಪ
ತಿಲಕನತಿವೇಗದಲಿ ರಥವನು
ಕೊಳುಗುಳಕೆ ತರೆ ಕಂಡನುತ್ತರ ಮುಂದೆ ದೂರದಲಿ।
ತಳಿತ ಕುಂತದ ಬಾಯಿಧಾರೆಯ
ಹೊಳಹುಗಳ ಹೊದಱಿದ್ದ ಸಿಂಧದ
ಸೆಳೆಯ ಸೀಗುರಿಗಳ ಸುರಂಭದ ಸಕಲಮೋಹರವ॥ ೩೫

ಜಡಿವ ಖಡ್ಗದ ಕಿಡಿಯು ಸೇನೆಯ
ತೊಡವುಗಳ ಕೇಸುರಿಯು ಬಲದು
ಗ್ಗಡದ ರಭಸದ ರೌದ್ರರವ ಛಟಛಟಿತನಿಸ್ವನದ।
ಇಡಿದ ಧೂಳಿಯು ಧೂಮರಾಶಿಯು
ಪಡೆ ವಿರಾಟನ ಸುತನ ಕಂಗಳಿ
ಗೊಡನೊಡನೆ ದಾವಾಗ್ನಿಯುಂತಿರೆ ತೋಱಿತಿದಿರಿನಲಿ॥ ೩೬
ಪ್ರಳಯ ಮೇಘದ ಮಾತೃಕೆಯೊ ಕರಿ
ಕುಳವೊ ಸಿಡಿಲಿನ ಗರುಡಿಯೋ ಕಳ
ಕಳವೊ ಕಲ್ಪಾನಳನ ಧೂಮಾವಳಿಯೊ ಕೈದುಗಳೋ।
ನೆಲನ ದಡ್ಡಿಯು ಬೆಟ್ಟದಡವಿಯೊ
ತಳಿತ ಟಿಕ್ಕೆಯವೋ ಜಗಂಗಳ
ನಳಿವ ಜಲಧಿಯೊ ಸೇನೆಯೋ ನಾನಱಿಯೆನಿದನೆಂದ॥ ೩೭
ಕಡೆಗೆ ಹಾಯವು ಕಂಗಳೀ ಬಲ
ಗಡಲ ಮನವೀಸಾಡಲಾಱದು
ಬಿಡಲುವಿಡಿದಿರಲೇನ ಕಾಣಲುಬಾರದದ್ಭುತವ।
ಪೊಡವಿಯೊಳಾದುದೊ ಮೋಹರವಿದ
ಱೊಡನೆ ಕಾದುವನಾವನಾತನೆ
ಮೃಡನು ಶಿವಶಿವ ಕಾದಿ ಗೆಲಿದೆವು ಬಲಕೆ ನವೊ ಎಂದ॥ ೩೮
ಹಸಿದ ಮಾರಿಯು ಮುಂದೆ ಸುಲಿ ಕುಱಿ
ನುಸುಳಿದಂತಾದೆನು ಬೃಹಂದಳೆ
ಎಸಗದಿರು ತೇಜಿಗಳ ತಡೆ ಚಮ್ಮಟಿಗೆಯನು ಬಿಸುಡು।
ಮಿಸುಕಬಾರದು ಪ್ರಳಯಕಾಲನ
ಮುಸುಕನುಗಿವವರಾರು ಕೌರವ
ನಸಮಬಲವೈ ರಥವ ಮರಳಿಚು ಜಾಳಿಸುವೆನೆಂದ॥ ೩೯

ಸಾರಿ ಬರಬರಲವನ ತನು ವಿಗೆ
ಭಾರಿಸಿತು ನ್ಯೈಮುರಿದು ರೋಮವಿ
ಕಾರದಲಿ ಕಾಹೇಱಿತವಯವ ನಡುಗಿತಡಿಗಡಿಗೆ।
ಭೂರಿ ಭಯತಾಪದಲಿ ತಾಳಿಗೆ
ನೀರುದೆಗೆದುದು ತುಟಿಯೊಣಗಿ ಸುಕು
ಮಾರ ಕಣ್ಣವೆ ಸೀಯೆ ಕರದಲಿ ಮುಚ್ಚಿದನು ಮುಖವ॥ ೪೦
ಏಕೆ ಸಾರಥಿ ರಥವ ಮುಂದಕೆ
ನೂಕಿ ಗಂಟಲ ಕೊಯ್ವ ಸುಡು ಸುಡು
ಕಾಕಲಾ ಕಣ್ಣೊಡೆಯುತಿದೆ ಕಾಣಾ ಮಹಾಬಲವ।
(ನಾಕನಿಳಯರಿಂಗರಿದು ನಿನಗೆ ವಿ
ವೇಕವೆಳ್ಳನಿತಿಲ್ಲಲಾ) ತೆಗೆ
ಸಾಕು ವಾಘೆಯ ಮರಳಿ ಸೆಳೆ ತೇಜಿಗಳ ತಿರುಹೆಂದ॥ ೪೧
ನುಡಿಯ ಕೇಳದೆ ಮುಂದೆ ನಾಲ್ಕೆಂ
ಟಡಿಯನರ್ಜುನ ರಥವ ಹರಿಸಲು
ಹಿಡಿದ ಬಿಲ್ಲಂಬುಗಳು ಬಿದ್ದವು ಕೈಯ ನರ ತೆಗೆದು।
ಹಿಡಿ ಹಯವನಿಱಿಗಾಜಿ ಸಾರಥಿ
(ನುಡಿವವರು ನಾವ್ ಹಗೆಗಳಿಗೆ) ನಿ
ನ್ನೊಡೆಯರಲ್ಲಾ ಸ್ವಾಮಿದುರುಹಿಕೆ ಲೇಸು ಲೇಸೆಂದ॥ ೪೨
ಎಂದಡರ್ಜುನ ನಗುತ ರಥವನು
ಮುಂದೆ ನಾಲ್ಕೆಂಟಡಿಯ ನೂಕಲು
ಕೊಂದನೀ ಸಾರಥಿಯೆನುತ ಸಂವರಿಸಿ ಮುಂಜೆಱಗ।
ನಿಂದು ಮೆಲ್ಲನೆ ರಥದ ಮೊದಲಿಗೆ
ಬಂದು ಧುಮ್ಮಿಕ್ಕಿದನು ಬದುಕಿದೆ
ನೆಂದು ನಿಟ್ಟೋಟದಲಿ ಹಾಯ್ದನು ಬಿಟ ಮಂಡೆಯಲಿ॥ ೪೩

ನೋಡಿದನು ಕಲಿಪಾರ್ಥನೀ ಕೇ
ಡಾಡಿ ಕೆದಱಿದ ಕೇಶದಲಿ ಕೆ
ಟ್ಟೋಡುತಿರಲೆಲೆ ಪಾಪಿ ಹಾಯ್ವನು ಹಿಡಿಯಬೇಕೆನುತ।
ಕೂಡೆ ಸೂಟಿಯೊಳಟ್ಟಲಿಳಿಯ
ಲ್ಲಾಡಿತಹಿಪತಿ ಕುಸಿದನತ್ತಲು
ನೋಡಿ ಕೌರವಸೇನೆ ಕೆಡೆದುದು ನಗೆಯ ಕಡಲೊಳಗೆ॥ ೪೪

ಎಲೆಲೆ ಕಾದಲು ಬಂದ ವೀರನ
ಬಲುಹ ನೋಡಾ ಶಿವ ಶಿವಾ ಬೆಂ
ಬಳಿಯಲಟ್ಟುವ ವೀರನಾರೋ ದಿಟ್ಟನವನಹನು।
ತಿಳಿಯಲರಿದಿವನಾವನೋ ವೆ
ಗ್ಗಳಿಯನಹನಾಕಾರದಲಿ ನೆಱೆ
ಫಲುಗುಣನ ಹೋಲುವನೆನುತ ಗಜಬಜಿಸಿತರಿಸೇನೆ॥ ೪೫

ಇತ್ತಲರ್ಜುನನುತ್ತರನ ಬೆಂ
ಬತ್ತಿದನು ನಿಲು ಹೋದೆಯಾದರೆ
ಕಿತ್ತುಬಿಸುಡುವೆ ನಿನ್ನ ಶಿರವನು ನಿಲ್ಲು ನಿಲ್ಲೆನುತ।
ಮಿತ್ತುವೋ ಸಾರಥಿಯೊ ಪಾಪಿಯು
ನೆತ್ತಣಿಂದವೆ ಮಾಡಿಕೊಂಡೆನೆ
ನುತ್ತ ಮರಳಿದು ನೋಡಿ ನಿಲ್ಲದೆ ಮತ್ತೆ ಸೈವರಿದ॥ ೪೬

ಇಟ್ಟಣಿಸಿ ನರ ನೂಱು ಹಜ್ಜೆಯೊ
ಳಟ್ಟಿ ಹಿಡಿದನಿದೇನ ಮಾಡಿದೆ
ಹುಟ್ಟಿದೆಯ ನೀಕ್ಷತ್ರವಂಶದೆ ಹಾ ಮಹಾದೇವ।
ದಿಟ್ಟತನದಲಿ ಹೆಂಗಳಿದಿರಲಿ
ಹೊಟ್ಟುಗುಟ್ಟಿದೆ ಹಗೆಗಳಿದಿರಲಿ
ಬಿಟ್ಟುಕೊಂಡೆ ದುರಾತ್ಮ ಮುಱಿದೆ ವಿರಾಟನನ್ವಯವ॥ ೪೭

ಹಲುಗಿರಿದು ಬಾಯೊಳಗೆ ಬೆರಳಿ
ಟ್ಟಳುಕಿ ತಲೆನಾಗಿದನು ಸಾರಥಿ
ಕಳುಹಿಕಳೆಯೈ ನಿನ್ನ ಬಸಿಱಲಿ ಮರಳಿ ಬಂದವನು।
ಕೊಳುಗುಳದೊಳೀಯೊಪ್ಪ ಮುಱಿವ
ಗ್ಗಳಿಕೆಯುಂಟೇ ಲೋಗರಿಂದವೆ
ಕೊಲಿಸದರು ನೀ ಕುತ್ತಿ ಕೆಡಹು ಕಠಾರಿಯಿದೆಯೆಂದ॥ ೪೮
ಮನದೊಳೊಡಲೊಡೆವಂತೆ ನಗುತ
ರ್ಜುನನು ಗಜಱಿದನೆಲವೊ ಸಭೆಯಲಿ
ವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆ ಬಂದಂತೆ।
ಅನುವರದೊಳೇನಾಯ್ತು ರಿಪುವಾ
ಹಿನಿಯನಿಱಿಯದೆ ನಾಡನರಿಯವೊ
ಲೆನಗೆ ನೀ ಹಲುಗಿಱಿಯೆ ಬಿಡುವೆನೆ ಕಾದು ನಡೆಯೆಂದ॥ ೪೯
ಕೊಳುಗುಳದೊಳೋಡಿದಡೆ ಹಜ್ಜೆಗೆ
ಫಲ ಮಹಾಪಾತಕವು ಮುಂದಣಿ
ಗೊಲಿದು ಹಜ್ಜೆಯನಿಡಲು ಹಜ್ಜೆಯೊಳಶ್ವಮೇಧಫಲ।
ಅಳಿದನಾದಡೆ ದೇವಲೋಕದ
ಲಲನೆಯರು ತೊತ್ತಿರು ಸುರೇಂದ್ರನು
ನೆಲನನುಗ್ಗಡಿಸುವನು ವೀರಸ್ವರ್ಗವಹುದೆಂದ॥ ೫೦
ಧುರದೊಳೋಡಿದ ಪಾತಕವ ಭೂ
ಸುರರು ಕಳೆದಪರಶ್ವಮೇಧವ
ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದೆಮಗೆ।
ಸುರರ ಸತಿಯರನೊಲ್ಲೆವೆಮಗೆ
ಮ್ಮರಮನೆಯ ನಾರಿಯರೆ ಸಾಕೆ
ಮ್ಮರಸುತನವೆಮಗಿಂದ್ರಪದ ನೀ ಬಿಟ್ಟು ಕಳುಹೆಂದ॥ ೫೧

ವಳಿತವನು ವಾರುವವ ಮುಕ್ತಾ
ವಳಿಯಲಂಕಾರವನು ಗಜವನು
ಲಲನೆಯರ ನಾನೀಸಿಕೊಡುವೆನು ರಾಜಭವನದಲಿ।
ಎಲೆ ಬೃಹಂದಳೆ ನಮ್ಮ ಬೊಪ್ಪನು
ಸಲಹಿದಡೆ ಕೈಯೊಡನೆ ತೋಱಿವೆ
ಕಲುಷಮನವಲಾ ನಿನ್ನದೆಂದರೆ ಪಾರ್ಥನಿಂತೆಂದ ॥ ೫೨
ಪೊಡವಿಪತಿಗಳ ಬಸುಱ ಬಂದೀ
ಯೊಡಲ ಕಕ್ಕುಲಿತೆಯಲಿ ಚಾಳಗ
ದೆಡೆಗೆ ಬಾರದರಿಲ್ಲ ಭೂತಭವಿಷ್ಯವಾನದಲಿ।
ನುಡಿಯಲಹುದೇ ಬಂಜೆನುಡಿಯನು
ಸುಡುಸುಡೆಲವೋ ರಾಜಬಾಹಿರ
ನಡೆ ವರೂಥದ ಹೊರೆಗೆ ಕಾದಲುಬೇಡ ಬಾ ಎಂದ ॥ ೫೩
ಕಾದುವೆನು ಮಾಱೊಡ್ಡಿನಲಿ ನೀ
ಜೋದಿಸೆನ್ನಯ ರಥವನಕಟಾ
ಹೇದೆತನವನು ಮಾದು ಸಾರಥಿಯಾಗು ಸಾಕೆನಲು।
ಆದಿಯಲಿ ನೀನಾವ ರಾಯರ
ಕಾದಿ ಗೆಲಿದ್ದೈ ಹುಲು ಬೃಹಂದಳೆ
ಯಾವ ನಿನಗೀ ಕದನ ನಾಟಕವಿದ್ಯೆಯಲ್ಲೆಂದ ॥ ೫೪
ಎಲವೊ ಸಾರಥಿಯಾಗು ಬಾ ಬಿಡೆ
ಗಳಹಿದರೆ ಕಟವಾಯ ಕೊಯ್ವೆನು
ಗೆಲುವೆನೀ ಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ।
ಬಳಿಕ ನೀ ನಗು ನಡೆಯೆನುತ ವರ
ಬಲಭಯಂಕರನುತ್ತರನ ಜಡ
ತಲೆಯ ಹಗರಿನೊಳಾಕಿ ತಂದನು ರಥವನೇಱಿಸಿದ ॥ ೫೫

ಖೇಡತನ ಬೇಡೆಲವೊ ರಣದಲಿ
ಗೂಡಿಡುವೆನಹಿತರನು ಹರಣವ
ಹೂಡಿಸುವೆನಂತಕನ ನಗರಿಗೆ ಥಟ್ಟನೊಡೆಹೊಯ್ದು ।
ಕೋಡದಿರು ಕೊಂಕದಿರು ಧೈರ್ಯವ
ಮಾಡಿ ಸಾರಥಿಯಾಗೆನುತ ಕಲಿ
ಮಾಡಿ ಕೊಂಡೊಯ್ದನು ಸಮೀಪದ ಶಮಿಯ ಹೊರೆಗಾಗಿ॥೫೬

ಮರನನೇಱಿದಱೊಳಗೆ ಪಾಂಡವ
ರಿರಿಸಿ ಹೋದರು ಕೈದುಗಳ ನೀ
ಹರಣ ಭರಣಕ್ಷಮೆಗಳಲಿ ತೆಗೆದೆನಗೆ ನೀಡೆನಲು ।
ಅರಸುಮಕ್ಕಳು ಮುಟ್ಟಲನುಚಿತ
ಮರದ ಮೇಲಣ ಹೆಣನಿದೇನೈ
ವರ ಬೃಹಂದಳೆ ಮತ್ತೆ ಕೆಲಸವ ನನಗೆ ಹೇಳೆಂದ ॥ ೫೭

ಹೊಱಗೆ ತೊಗಲೊಳು ಬಿಗಿದು ಕೆಲಬಲ
ನಱಿಯದಂತಿರೆ ಪಾಂಡುನಂದನ
ರು ಱುವಕೈದುವನಿರಿಸಿದರು ಹೆಣನಲ್ಲ ತೆಗೆಯೆನಲು।
ಸೆಱಗನಳವಡೆ ಸಿಕ್ಕಿ ಭೀತಿಯು
ತೊಱೆದು ತುದಿಮರನೇಱಿನೇಣ್ಗಳ
ಹಱಿದುಕೈದುವ ಕಂಡು ಮಿಗೆಯಂಜಿದನುಭಯಹೊಯ್ದು॥೫೮

ಕಾಳಭುಜಗನೊ ಖಡ್ಗವೋ ಶರ
ಜಾಲವೋ ಕಲ್ಪಾಂತವಹ್ನಿ
ಜ್ವಾಲೆಯೋ ಕೈದುಗಳೊ ಕಾಲಾಂತಕದ ದಾಡೆಗಳೋ।
ತೋಳುಧರಿಸುವಡರಿದು ನೋಡಿವ
ಡಾಲಿಯುರೆ ಬೆ ದವು ಬೃಹಂದಳ
ಕಾಳುಮಾಡಿದೆ ಕೊಂದೆಯೆನುತೋರಂತೆ ನಡುಗಿದನು॥ ೫೯

ತುಡಕಬಹುದೇ ದೋಷಿ ಹಾವಿನ
ಕೊಡನನೆನಗಿದು ಕೈದುವೇ ಬಱ
ಸಿಡಿಲ ಡಾವಣಿಯಾಗಿಯಿದೆ ಕೈಯಿಕ್ಕಲಂಜುವೆನು ।
ಬಿಡಿಸು ಸಾರಥಿಯೆನ್ನನೆನೆ ಘಡ
ನಡುಗದಿರು ಫಲುಗುಣನ ನೆನೆ ಕೈ
ದುಡುಕು ಕೈವಶವಹುದು ತೆಗೆ ಸಾಕೆಂದನಾ ಪಾರ್ಥ ॥ ೬೦
ಉಲಿದು ಸತ್ತ್ವದೊಳೌಕಿ ಕಾಯುವ
ಬಲಿದು ತೆಕ್ಕೆಯೊಳೊತ್ತಿ ಬೆಮರುತೆ
ಬಳಲಿ ನೀಡಿದನರ್ಜುನನ ಕರತಳಕೆ ಗಾಂಡಿವವ ।
ಬಲುಹಿನಿಂದೌಡೊತ್ತಿ ತೆಗತೆಗೆ
ದುಳಿದ ಬಿಲ್ಗಳ ನೀಡಿ ಮರನನು
ಮಲಗಿ ಥಗೆಯಿಂದಳ್ಕಿ ಹೊಯ್ದು ಕುಮಾರನಿಂತೆಂದ ॥ ೬೧
ಹೇಳು ಸಾರಥಿ ಬಿಲ್ಲಿದಾವನ
ತೋಳಿಗಳವಡುವುದು ಮಹಾಶರ
ಜಾಲ ಬೆಸಕೈದಪವಿದಾರಿಗೆ ಮಿಕ್ಕ ಬಿಲ್ಲುಗಳು ।
ಕಾಳಗದೊಳಿವನಾರು ತೆಗೆವರು
ಮೇಲುಗೈದುಗಳಾರಿಗಿವು ಕೈ
ಮೇಳವಿಸುವವು ಮನದ ಸಂಶಯ ಹಿಂಗೆ ಹೇಳೆಂದ ॥ ೬೨
ಇದು ಕಣಾ ಗಾಂಡೀವ ತಾನೆಂ
ಬುದು ಮಹಾಧನು ಪಾರ್ಥನದು ಬಳಿ
ಕಿದು ಯುಧಿಷ್ಠಿರ ಚಾಪವೀಧನು ಭೀಮಸೇನನದು ।
ಇದು ನಕುಲಕೋದಂಡ ಬಿಲು ತಾ
ನಿದುವೆ ಸಹದೇವನದು ಭಾರಿಯ
ಗದೆಯಿದನಿಲಜನದು ಕಿರೀಟಿಯ ಬಾಣವಿವು ಎಂದ ॥ ೬೩

ಆರು ನೀನರ್ಜುನನೊ ನಕುಲನೊ
ಮಾರುತನ ಮಗನೋ ಯುಧಿಷ್ಠಿರ
ವೀರನೋ ಸಹದೇವನೋ ಮೇಣವರ ಬಾಂಧವನೋ ।
ಧೀರ ಹೇಳೈ ಬೇಡಿಕೊಂಬೆನು
ಕಾರುಣಿಕ ವಿಸ್ತರಿಸು ಪಾಂಡುಕು
ಮಾರಕರಾಯುಧತತಿಯ ನೀನೆಂತಱಿಯಬಹುದೆಂದ ॥ ೬೧

ಆವಡಾನರ್ಜುನನು ಬಾಣಸಿ
ಯಾದ ವಲಲನು ಭೀಮ ವರಯತಿ
ಯಾದ ಕಂಕನು ಧರ್ಮಪುತ್ರನು ನಿಮ್ಮ ಗೋಕುಲವ ।
ಕಾದವನು ಸಹದೇವ ರಾವುತ
ನಾದವನು ನಕುಲನು ವಿಳಾಸಿನಿ
ಯಾದವಳು ಸೈರಂಧ್ರಿಯೈವರ ರಾಣಿ ಕೇಳೆಂದ ॥ ೬೨

ಇದು ಕಣಾ ಧರ್ಮಜನ ಸತ್ಯಾ
ಭ್ಯುದಯಕೋಸುಗ ಊರ್ವಶಿಯು
ಶಾಪದಲಿ ಬಂದುದು ಹೊತ್ತು ನೂಕಿದೆನೊಂದು ವತ್ಸರವ ।
ಇದಕೆ ನಲ್ಜೋಡಾಯ್ತು ನಿರ್ವಿ
ಘ್ನದಲಿ ಪುಟ್ಟಿದೆವವಧಿಯನು ನ
ವ್ಯಪಟುತನವನು ಭೀತಿಯಿಲ್ಲದೆ ನೋಡು ನೀನೆಂದ ॥ ೬೩

ಬಳಿಯ ನೆಗ್ಗೊತ್ತಿದನು ಕೌರವ
ಬಲದ ಗಂಟಲ ಬಳಿಯ ಮುಱಿವವೊ
ಲಲಘುಸಾಹಸಿ ಘಳಿಯನುಟ್ಟನು ಮಲ್ಲಗಂಟಿನಲಿ ।
ತಲೆನವಿರ ಹಿಣಿಲಿಱಿದು ತಿಲಕವ
ಗೆಲಿದು ಕಿಗ್ಗಟ್ಟಿನ ಕಠಾರಿಯ
ಹೊಳೆವ ಗೊಂಡೆಯ ಮೆಱೆಯೆ ಗಂಡಂದವನು ಕೈಕೊಂಡ ॥ ೬೪

ತೇರ ತೆಗೆದನು ತನ್ನ ಮುನ್ನಿನ
ವಾರುವಂಗಳ ಹೂಡಿದನು ಕಪಿ
ವೀರ ನೆನೆಯಲು ಬಂದು ಮಂಡಿಸಿದನು ರಥಾಗ್ರದಲಿ ।
ಬಾರುಸೀಸಕ ಜೋಡು ಕುಲಿಸದ
ಸಾರಕವಚವ ಬಿಗಿದು ಬೊಬ್ಬೆಯ
ಭಾರಣೆಯು ಮಿಗೆ ಧನುವ ಕೊಂಡನು ತಿರುವನೇಱಿಸಿದ॥ ೬೮

ರಾಯುಧರ್ಮಜ ಜಬಾಳಗೆಂದು ನಿ
ಜಾಯುಧಂಗಳಿಗೆಱಗಿದನು ಸುರ
ರಾಯನಂದನ ಸಲವಿನಲಿ ಗಾಂಡಿವವ ಜೇವಡೆದು ।
ರಾಯಗುರುವರನ ಸೂತತನದ ವಿ
ಡಾಯಿಯಱಿಯಲುಬಹುದೆನುತೆ ಸಮ
ರಾಯತಾಸ್ತ್ರನು ಪಾರ್ಥ ವೈದೋಱಿದನು ಪರಬಲಕೆ ॥ ೬೯

---

## ೬. ಕೌರವರಾಯ ದಳವನು ಜಯಿಸಿದನು

ಭಯವು ಭಾರವಿಸಿತ್ತು ಜನಮೇ
ಜಯ ಮಹೀಪತಿ ಕೇಳು ಕುರುಸೇ
ನೆಯಲಿ ಭೀಷ್ಮದ್ರೋಣರಱಿದರು ಪಾರ್ಥನೆಂಬುವನು ।
ಜಯವು ಜೋಡಿಸಲಱಿಯದಿದು ಸಂ
ಶಯವೆ ಸುಳಿವುತ್ಪಾತಶತವಿದು
ಲಯದ ಬೀಜವು ಭೀಷ್ಮ ಚಿತ್ತೈಸೆಂದನಾ ದ್ರೋಣ ॥ ೧

ಬಿರಿಯಲಬುಜಭವಾಂಡವಿದೆ ಕಪಿ
ವರನ ಕಳಕಳ ದೇವದತ್ತದ
ಧರಧುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದು ।
ನರನ ನಿಷ್ಠುರ ಸಿಂಹರವವಿದೆ
ತುರಗದಳ್ಳುರಿ ಸಾಱುತಿದೆ ಸಂ
ಗರಕೆ ಸಾಹಸಮಲ್ಲ ಮೊಳಗಿದನೆಂದನಾ ದ್ರೋಣ॥ ೨

ಬಂದು ಭೀಷ್ಮಂಗೆಱಗಿ ಕೈಮುಗಿ
ದೆಂದನೀತನು ಪಾರ್ಥನಾದಡೆ
ಹಿಂದಣಂತಿರೆ ನವೆಯಬೇಹುದು ವರುಷ ಹದಿಮೂಱು ।
ಸಂದುದಿಲ್ಲಜ್ಞಾತವಾಸಕೆ
ಮುಂದೆ ದಿನವಿಹುದೆನ್ನ ಲೆಕ್ಕದೊ
ಳೆಂದು ಕುರುಪತಿ ನುಡಿಯೆ ನಗುತಿಂತೆಂದನಾ ಭೀಷ್ಮ ॥ ೩

ಮಗನೆ ಕೇಳೀರೈದುವರುಷಕೆ
ಮಿಗುವವೆರಡೇ ಮಾಸ ಮಾಸಾ
ದಿಗಳನವರನುಭವಿಸಿದರು ಹದಿಮೂರುವತ್ಸರ ವ ।
ಮಿಗುವವಧಿ ಬುಧರರಿಯೆ/ನಿನ್ನಿನ
ಹಗಲು ನಿನ್ನದು/ಪಾಂಡುತನಯರು
ಹುಗುವಡಿಂದಿನ ದಿವಸವವರದು ಕಂದ ಕೇಳೆಂದ ॥ ೪
ಜಲಧಿ ಮೇರೆಯನೊಡೆದು ಹಾಯಲಿ
ನೆಲನನಿಳುಹಲಿ ದಿಗಿಭವಿನಮುಂ
ಡಲಕೆ ಕಾಳಿಕೆಯಿಡಲಿ ನಡೆವಾಡಲಿ ಕುಲಾದ್ರಿಗಳು ।
ಅಳುಪಲರಿವನೆ ಸತ್ಯಭಾಷೆಗೆ
ಕಲಿಯುಧಿಷ್ಠಿರನೃಪತಿಯನ್ವಯ
ತಿಲಕನರಿಯಾ ತಂದೆ ಕೌರವರಾಯ ನೀನೆಂದ ॥ ೫
ಸಾಕದಂತಿರಲಿನ್ನು ಕಾಳಗ
ನೂಕಲರಿಯದು ಪಾರ್ಥ ಕೊಲುವಡೆ
ಬೇಕು ಬೇಡೆಂಬವರ ಕಾಣೆನು ಹಲವು ಮಾತೇನು ।
ಆಕುಮಾರರ ಕರೆಸಿ ಸಂಧಿಯ
ನಾಕೆವಾಳರ ಮುಂದೆ ಮಾಡಲು
ಲೋಕದೊಳು ಸರಿಯಿಲ್ಲ ನಿನಗೆ ಮಹೀಶ ಕೇಳೆಂದ ॥ ೬
ಕಂಡುದಳವಿ ವಿರೋಧಿಗೆಮಗೆಯು
ಕೊಂಡುದೇ ಬಲುಗೈದು ಮನಮುಂ
ಕೊಂಡು ಹೊಕ್ಕುದು ಕಳನದಲ್ಲದೆ ಪಾಂಡುಸುತರೊಡನೆ ।
ಉಂಡು ಮೇಣುಟ್ಟೊಲಿದು ಬದುಕುವ
ಭಂಡತನದವರಲ್ಲ ವೈರವ
ಕೊಂಡೆಸಗಬೇಕೆಂದು ನುಡಿದನು ಕೌರವರರಾಯ ॥ ೭

ಮೇಲೆ ನೆಗಳುವ ಹದನನಲ್ಲಿಂ
ಮೇಲೆ ನೀನೇ ಬಲ್ಲೆಯೆನುತೆ ವಿ
ಶಾಲಮತಿ ಬಿಸುಸುಯ್ದು ಕೌರವ ಕೆಟ್ಟನಕಟೆನುತೆ ।
ಕಾಳಗವ ನಾವಾಸುವೆವು ಪಶು
ಜಾಲಸಹಿತಿಭಪುರಿಗೆ ನೀ ಕಿಱಿ
ದಾಳೊಡನೆ ನಡೆಯೆಂದು ಸೇನೆಯನೆರಡು ಮಾಡಿಸಿದ ॥ ೮
ಕೌರವೇಂದ್ರನ ಕೂಡೆ ಸೇನಾ
ಭಾರವನು ಪರುಠವಿಸಿ ಕಳುಹಿದ
ನಾರುಭಟೆಯೊಳು ಭೀಷ್ಮ ನಿಂದನು ಥಟ್ಟ ಮೇಳೈಸಿ ।
ವೀರಕರ್ಣದ್ರೋಣಗೌತಮ
ಭೂರಿಬಲಗುರುಸೂನು ಶಕುನಿ ಮ
ಹಾರಥಾದಿಯು ಕೂಡಿಕೊಂಡನು ನರನ ಕಾಳಗಕೆ ॥ ೯
ಇತ್ತಲಖಿಳಮಹಾರಥಾದಿಯು
ನೊತ್ತಲಿಕ್ಕಿ ಸುಯೋಧನನು ಪುರ
ದತ್ತ ಗೋಕುಲಸಹಿತ ಹಾಯ್ದನು ಪೂತುಮಝು ಎನುತ ।
ಮುತ್ತಯನು ಮಾಡಿದ ನಿಯೋಗದ
ತತ್ತವಣೆ ಲೇಸಾಯ್ತು ಬೇಗವ
ಲುತ್ತರನೆ ಕೊಳ್ಳಿಡದ ವಾಘೆಯನೆಂದನಾ ಪಾರ್ಥ ॥ ೧೦
ಎನಲು ಚಪ್ಪರಿಸಿದನು ತೇಜಿಗ
ಳನಿಲಜವದಲಿ ತೂಳಿದವು ಮುಂ
ಮೊನೆಯುವರ ಮನ್ನಿಸದೆ ಬೆಂಬತ್ತಿದನು ಕೌರವನ ।
ಜನಪ ಬಿಡು ಬಿಡು ತುಱುಗಳನು ಫಲು
ಗುಣಕಣಾ ಬಂದವನು ಕುರುಕುಲ
ವನದವಾನಲನಱಿಯೆ ಎನುತುತ್ತರನು ಬೊಬ್ಬಿಱಿದ ॥ ೧೧

ಎಲೆಲೆ ನರ ಜಾಱಿದನು ರಾಯನ
ಬಳಿಯ ಹತ್ತಿದನಡ್ಡ ಹಾಯ್ದತಿ
ಬಳನ ತೆಗೆ ನವ್ಮತ್ತಲೆನುತಾ ದ್ರೋಣ ಗೌತಮರು ।
ಹಿಳುಕ ಕೆನ್ನೆಗೆ ಸೇದಿ ಬೊಬ್ಬೆಯ
ಕಳಕಳದಿ ನಡುಗಟ್ಟಿದರು ನಿ
ಲ್ಲೆಲವೊ ಫಲುಗುಣ ಕಾದಿ ನೀನೊಟ್ಟೈಸಿ ಹೋಗೆನುತ ॥ ೧೨
ನಗುತ ಫಲುಗುಣನೆರಡೆರಡು ಕೋ
ಲುಗಳನವನಂಘ್ರಿಗೆಚ್ಚನು
ತೆಗೆದು ಹಾಯ್ದನು ಮತ್ತೆ ಕೌರವರಾಯನೋಹರಕೆ ।
ಹೊಗರುಗುವ ಹೊಸಕಣೆಯ ದಡ್ಡಿಯ
ಬಿಗಿದನೆಡದಲಿ ಬಲದಲಿದಿರಲಿ
ಸೆಗಳಿಕೆಯ ಸಸಿಯಾಯ್ತು ಕೌರವನೇನೆ ನಿಮಿಷದೊಳು ॥ ೧೩
ಬೊಬ್ಬಿಱಿದು ನರನೆಸಲು ಕಣೆಗಳು
ಹಬ್ಬಿದವು ಹುರಿಗೊಂಡು ಹೂಣಿಗ
ರೊಬ್ಬುಳಿಯ ಹರೆಗಡಿದು ಕರಿಗಳ ಸೊಪಱ ಮಡೆಗೆಡಹಿ ।
ತಿಬ್ಬನೊಡೆದಣುಕೆದ್ದು ಗಱಿಮೊರೆ
ದಬ್ಬರಿಸಿ ಕಬ್ಬಕ್ಕಿ ಗಗನವ
ಮಬ್ಬಿಡುವವೊಲು ಮುಸುಕಿದವು ಫಲುಗುಣನ ಶರಜಾಲ॥ ೧೪
ತುಡುಕಿ ಖಂಡವ ಕಚ್ಚಿ ಹಾಱುವ
ಗಿಡುಗನಂತಿರೆ ಭಟರ ಗಂಟಲ
ಕಡಿದು ಹಾಯ್ದಂಬುಗಳು ಬಿದ್ದವು ತೋರತಲೆಗಳಲಿ ।
ಅಡಸಿದವು ನಿಱು ನಿಟಿಲುಗರದಲು
ವೊಡೆದು ಥಟ್ಟುಗಿದಾನೆಗಳ ನಡೆ
ಗೆಡಹಿದವು ಗಱಿಸಹಿತ ಹಾಯ್ದವು ಹಯದ ಹೊಟ್ಟೆಯೊಳು॥೧೫

ಚಲ್ಲಿಹೋಯಿತು ಕೆಲರು ಕೆಲಬರು
ಬಿಲ್ಲ ಬಿಸುಟರು ಕೋಲುಕಟ್ಟಿತು
ಗೆಲ್ಲಗೆಟ್ಟರು ಕೆಲರು ಪಾರ್ಥನ ಕೋಲ ಕೋಹಿನೊಳು ।
ಮೆಲ್ಲಮೆಲ್ಲನೆ ಸರಿವ ಕೌರವ
ಮಲ್ಲನನು ಕಂಡಡ್ಡವಿಸಿ ತುಱು
ಗಳ್ಳ ಹೋಗದಿರೆನುತ ಮೂದಲಿಸಿದನು ಕಲಿಪಾರ್ಥ ॥ ೧೬

ಕಾಯಲಾಪಡೆ ಕರೆಯಿರೈ ಕ
ರ್ಣಾಯತಾಸ್ತ್ರರನಕಟ ಕೌರವ
ರಾಯ ಸಿಲುಕಿದನೆಲ್ಲಿ ಭೀಷ್ಮದ್ರೋಣ ಕೃಪರೆನುತ ।
ಬಾಯಬಿಡೆ ಕುರುಸೇನೆ ಗುರುಗಾಂ
ಗೇಯ ಶಕುನಿ ವಿಕರ್ಣಕೃಪರಾ
ಧೇಯಸೈಂಧವ ಚಿತ್ರಸೇನಾದಿಗಳು ಕೂಡಿದರು ॥ ೧೭

ಇತ್ತ ತುಱುಗಳ ಬಿಸುಟು ರಾಯನ
ತೆತ್ತಿಗರು ತಲ್ಲಣಿಸಿ ಹರಿದರು
ಹೊತ್ತಿದರು ಹೊಗೆನೆಗೆಹಿದಾಹವಗಹನಗರ್ವಿತರ ।
ಸುತ್ತು ಗೋವರ ಸನ್ನೆಯಲಿ ಪುರ
ದತ್ತ ಮುಂತಾದುದು ಪಶುವ್ರಜ
ವುತ್ತರನು ಮುಳುಗಿದನು ಪರಿತೋಷಪ್ರವಾಹದೊಳು ॥ ೧೮

ಬಿಗಿದ ಕೆಚ್ಚಲ ತೊರೆದುಗುವ ಹಾ
ಲುಗಳ ಮಿಗೆ ಸೂಳೆದ್ದ ಬಾಲದ
ಮೊಗ ನೆಗಹಿ ದೆಸೆದೆಸೆಯ ನೋಡುವ ಬೆಚ್ಚಿಬಿಱುವರಿವ ।
ಅಗಿದು ಸರಳಿಸಿ ನಿಲುವ ಹೊಸಬರ
ಸೊಗಡಿಗವ್ವಳಿಸುತ್ತೆ ಗೋವರು
ತೆಗೆದ ಪಥದಲಿ ತೆಕ್ಕೆವರಿದೆವು ಹಿಂಡು ಸಂದಣಿಸಿ ॥ ೧೯

ತಿರುಗಿ ಕೆಂದೂಳಿಡುತ ತುರುಗಳು
ಪುರಕೆ ಹಾಯ್ದವು ನಲವು ಮಿಗಲು
ತ್ತ್ರರಕಿರೀಟಿಗಳಾಂತು ನಿಂದರು ಮತ್ತೆ ಕಾಳಗಕೆ ।
ಅರಸು ಮೋಹರ ಮುರಿದ ಹರಿಬವ
ಮರಳಿಚುವ ಮಿಡುಕುಳ್ಳ ವೀರರು
ಬರಲಿಯೆಂದಡಿಗಡಿಗೆ ಬಿಲ್ಲನು ತೂಗಿದನು ಪಾರ್ಥ॥ ೨೦
ಮರಳಿದವು ತುರು ಮಾರಿಗೌತಣ
ಮರಳಿ ಹೇಳಿತು ಹಸಿದ ಹೆಬ್ಬುಲಿ
ಮೊರೆಯೆ ಮೈದೋರಿದವು ಹುಲುಮೃಗವೇನನುಸಿರುವೆನು ।
ಧರಣಿಪನ ಹಿಂದಿಕ್ಕಿ ಸೌಬಲ
ದುರುಳ ದುಸ್ಸಹ ಸೈಂಧವಾದಿಗ
ಳುರುಬಿದರು ತರುಬಿದರು ಪರಬಲಕಾಲಭೈರವನ ॥ ೨೧
ಮರಳಿದವು ತುರುವೆಂಬ ಗರ್ವದ
ಗಿರಿಗೆ ಕೋ ಕುಲಿಶವನು ಸೇನೆಯು
ನೊರಸಿದುತ್ಸವಜಲಧಿಗಿದೆ ಕೋ ಬಾಡಬಾನಲನ ।
ಅರಸನಳುಕಿದನೆಂಬ ಜಯದು
ಬ್ಬರದ ಬೆಳಸಿಗೆ ಕಡುನಿದಾಘದ
ಬಿರುಬಿಸಿಲ ಕೊಳ್ಳಿಂದು ಕೈಕೊಂಡೆಚ್ಚರತಿರಥರು ॥ ೨೨
ಭಂಡರುಲಿದಡೆ ಗರುವರದ ಮಾ
ರ್ಕೊಂಡು ನುಡಿವರೆ ಸಾಕಿದೇತಕೆ
ದಿಂಡುದರಿವೆನು ನಿಮಿಷ ಸೈರಿಸಿ ನಿಂದು ಕಾದುವಡೆ ।
ಕೊಂಡಹಜ್ಜೆಯ ಹಂಗಿಗರು ಮಿಗೆ
ದಿಂಡುಗಿಡುವಿರಿ ನಿಮ್ಮ ನುಡಿ ತಾ
ಕಂಡುಬಲ್ಲೆನೆನುತ್ತ ಫಲುಗುಣನೆಚ್ಚನತಿರಥರ ॥ ೨೩

ಸವಗ ಸೀಳಿತು ಕೃಪನ ಭೀಷ್ಮನ
ಕವಚ ಹರಿದುದು ದ್ರೋಣ ನೊಂದನು
ರವಿಯ ಮಗ ಮುಸೆಗಂಡನಶ್ವತ್ಥಾಮ ವೈಮುಱಿದ ।
ಅವನಿಪತಿಗೇಱಾಯ್ತು ಸಲೆ ಸೈಂ
ಧವ ಶಕುನಿ ದುಶ್ಶಾಸನಾದಿಗ
ಳವಯವದೊಳಂಬುಗಳನಾಯ್ದರು ತೋದ ರಕುತದೊಳು॥೨೪

ಕಡಿವಡೆದುದಕ್ಷೋಣಿ ಬಲ ಬೆಂ
ಗೊಡದೆ ನೊಂದರು ಹಲಬರಿನ್ನೇ
ನೊಡಲುಗಳ ಮೇಲಾಸೆಯೆಂದಬ್ಬರಣೆ ಮಿಗೆ ಮಸಗಿ ।
ಸೆಡೆದು ಸೊಪ್ಪಾದಖಿಳರಾಯರ
ಗಡಣವನು ಬೋಳೈಸಿ ಮಗುಳವ
ಗಡಿಸಿ ನೂಕಿತು ಸೇನೆ ಭೀಷ್ಮದ್ರೋಣರಾಜ್ಞೆಯಲಿ ॥ ೨೫

ಇತ್ತಲಿತ್ತಲು ಪಾರ್ಥ ನಿಲು ನಿಲು
ಮುತ್ತಯನ ಹಾರುವರನಂಜಿಸಿ
ಹೊತ್ತುಗಳೆದರೆ ಹೋಹುದೇ ವೈದೋಱು ಕೈದೋಱು ।
ತೆತ್ತಿಗರ ಕರೆ ನಿನ್ನ ಬೇರನು
ಕಿತ್ತು ನೀರೊಳು ತೊಳೆವ ರಿಪುಭಟ
ಮಿತ್ತುವಱಿಯಾ ಕರ್ಣನೆನುತಿದಿರಾಗಿ ನಡೆತಂದ ॥ ೨೬

ಉಂಟು ನೀನಾಹವದೊಳಗೆ ಗೆಲ
ಲೆಂಟೆದೆಯಲಾ ನಿನ್ನ ಹೋಲುವ
ರುಂಟೆ ವೀರರು ಕೌರವೇಂದ್ರನ ಬಹುಳ ಕಟಕದಲಿ ।
ಟೆಂಟಣಿಸದಿದಿರಾಗು ನಿನ್ನಯ
ಸುಂಟಿಗೆಯನಿತ್ತಖಿಳಭೂತದ
ನಂಟನರ್ಜುನನೆನಿಸಿ ತೋಱುವೆ ಕರ್ಣ ಕೇಳೆಂದ ॥ ೨೭

ಚಕಿತಚಾಪರು ಗಾಢಬದ್ಧ
ಭ್ರುಕುಟಿಭೀಷಣಮುಖರು ರೋಷ
ಪ್ರಕಟಪಾವಕವಿಸ್ಫುಲಿಂಗರು ಕೂಡೆ ಸಮತಳಿಸಿ ।
ವಿಕಟತರವೇಲ್ಲಿತಮಹಾಸಾ
ಯಕರು ನಿಷ್ಠುರಸಿಂಹಗರ್ಜನ
ವಿಕಲಿತಾಚಲಸಂಧಿಬದ್ಧರು ಹೊಕ್ಕು ಹೆಣಗಿದರು ॥ ೨೮

ಬಲುಗಡಿಯನಹೆ ಬೇಟೆಗಾಱರ
ದಳದ ಮೊದಲಿಗನಹೆ ವಿರೋಧಿಯ
ದಳಕೆ ನೀನೊಡ್ಡುಳ್ಳ ಭಟನಹೆ ಸ್ವಾಮಿಕಾರಿಯಕೆ ।
ತಲೆಯ ತೆಱುವವನಹೆ ಕುಭಾಷೆಗೆ
ಮಲೆವವರು ನಾವಲ್ಲ ಸೈರಿಸು
ಬಳಿಕೆನುತ ಕಲಿಪಾರ್ಥ ಸುರಿದನು ಸರಳ ಸರಿವಳೆಯ ॥ ೨೯

ಇಡಿದ ಮೋಡದ ಮುತ್ತಿಗೆಯ ಮೇ
ಲೊಡೆದು ಮೂಡುವ ರವಿಯವೊಲು ನೆಱೆ
ಕಡಿದು ಶರಪಂಜರವ ಹೊಡಿದನರ್ಜುನನ ಮುಸುಕೆ ।
ನಡುಗಿದನು ವೈರಾಟ ಹಯವಡಿ
ಗಡಿಗೆ ನೊಂದವು ಹನುಮನಂಬರ
ವೊಡೆಯೆ ಬೊಬ್ಬಿಱಿದನು ಮಹಾದ್ಭುತವಾಯ್ತು ನಿಮಿಷದಲಿ ॥

ಅರಿಭಟನ ಶರಜಾಲವನು ಸಂ
ಹರಿಸಿದನು ನಿಮಿಷದಲಿ ಫಲುಗುಣ
ನೆರಡುಶರದಲಿ ಸಾರಥಿಯನೈದಂಬಿನಲಿ ರಥವ ।
ಶರಚತುಷ್ಟಯದಿಂದ ಕರ್ಣನ
ಕರದ ಬಿಲ್ಲನು ಕಡಿಯೆ ಭಗ್ನೋ
ತ್ಕರುಷಭಂಗಿತನಾಗಿ ಸರಿದನು ಮೌನದಲಿ ಕರ್ಣ ॥ ೩೧

ಓಟವೇ ಅಪಜಯದ ಬೊಡ್ಡಿಯ
ಬೇಟವೇ ಬೆಸಗೊಳ್ಳಿರೈ ಒಳ
ತೋಟಿಗೊತ್ತೋಳಹುದು ನಾಲಗೆಯೊಗಳೇನಾಯ್ತು ।
ಆಟವಿಕ ಭೂಪತಿಯ ಕೀರ್ತಿಯ
ಕೂಟಣಿಗಳೊಗ್ಗಾಯ್ತು ತೆಗೆ ಮರು
ಳಾಟವೆಮಗೇಕೆನುತೆ ಪಾರ್ಥನ ತಾಗಿದನು ದ್ರೋಣ ॥ ೩೨
ಇದಿರುಗೊಳ್ಳೈ ಪಾರ್ಥ ವಿಪ್ರ
ರ್ಗದಟುತನವೆಲ್ಲಿಯದು ಕರ್ಣನ
ಸದೆಬಡಿದ ಸಾಹಸಕೆ ಹಿಗ್ಗದಿರೆಮ್ಮ ಕೈಗುಣವ ।
ಕವನಬಲಿ ನೀ ನೋಡು ಕೈಸಾ
ರಿದವು ಗಡ ಕಾಮಾರಿ ಹಿಡಿವ
ಗ್ಗದ ಶರಾವಳಿಯವಜಿ ಪರಿಯೆಂತೆಮಗೆ ತೋರೆಂದ ॥ ೩೩
ಇದಿರುಗೊಂಡೆನು ವಂದಿಸಿದೆನೆ
ಮ್ಮದಯ ನಿಮ್ಮದು ನಿಮ್ಮ ಕೃಪೆಯಲಿ
ವಿದಿತವೆನಗೀವಿದ್ಯೆ ನೀ ಕಾಮಾರಿ ಮುರವೈರಿ ।
ಹೃದಯ ನಿಮ್ಮದು ಕಾಳಗಕೆ ನಿ
ಮ್ಮದಿರೊಳಾಳೇ ತಾನು ಕರುಣಾ
ಸ್ಪದರು ನೀನೆಂದೆಚ್ಚನರ್ಜುನನವರ ಸಿರಿಪದಕೆ ॥ ೩೪
ವಿನಯವುಚಿತವೆ ತತ್ತ ಸಮಯದೆ
ಮೊನೆಯೊಳಾರಿದಿರಾದಡಿಜಿವುದು
ಜನಪರಿಗೆ ಕರ್ತವ್ಯವದು ಸಾಕುಳಿದ ಮಾತೇಕೆ ।
ತನುಜ ಸೈರಿಸು ಸೈರಿಸೆನುತೆ
ಚ್ಚನು ನಿರಂತರ ಬಾಣವರ್ಷವ
ನನಿಮಿಷಾವಳಿ ಪೊತುರೆನೆ ಕೈದೋಜಿದನು ದ್ರೋಣ ॥ ೩೫

ಭಾವಿಸಲು ಪ್ರತಿಬಿಂಬದಲಿ ಬೇ
ಱಾವುದತಿಶಯವುಂಟು ನೀವೆನ
ಗಾವಪರಿಯಲಿ ಕಲಿಸಿದಿರಿ ನಿಮಗೊಪ್ಪಿಸುವೆನದನು ।
ನೀವು ನೋಡುವುದೆನುತ ನರನಿಸ
ಲಾವುದಂಬರವಾವುದವನಿಯ
ದಾವುದರಿಬಲವೆನಲು ಹಬ್ಬಿತು ಪಾರ್ಥಶರಜಾಲ ॥ ೩೬

ಹಿಳುಕನೀದುದೊ ಗಗನವಂಬಿನ
ಜಲಧಿ ಜರಿದುದೊ ಪಾರ್ಥನೆಂಬ
ಗ್ಗಳವಿರಿಂಚನ ಬಾಣಸೃಷ್ಟಿಯೊ ಬಲ್ಲರಾರಿದನು ।
ಇಳೆಯ ಮರ್ತ್ಯರು ಶಿವ ಶಿವಾ ತೆಗೆ
ಫಲುಗುಣಗೆ ಸರಿಯೆಂಬವರ ಬಾಯ್
ಹುಳಿವುದೊ ಗುಣಕೆ ಮತ್ಸರವೆ ಎನುತಿದ್ದುದರಿಸೇನೆ ॥ ೩೭

ಬಳಿಕ ಪಾರ್ಥನ ಬಾಣದಲಿ ಬಸ
ವಳಿಯೆ ಸಾರಥಿ ಮೆಲ್ಲಮೆಲ್ಲನೆ
ತೊಲಗಬಗೆದನು ದ್ರೋಣನಿತ್ತಲು ಕರ್ಣನೀಕ್ಷಿಸುತ ।
ಎಲೆಲೆ ಶಸ್ತ್ರಾಚಾರ್ಯ ಗೆಲಿದನು
ಫಲುಗುಣನನಿನ್ನೇನು ಕೌರವ
ಬಲದ ಹಗೆ ಹಱವಾಯ್ತು ರಾಜಾಭ್ಯುದಯವಾಯ್ತೆಂದ ॥ ೩೮

ಬಾಯಿ ಬಿಟ್ಟುದು ನಿಖಿಳ ಕೌರವ
ರಾಯದಳ ವಡ ಮುಖದಲದಟರು
ಹಾಯಿದರು ತಮತಮಗೆ ತೆಱದೆಱಸಾಯ್ತು ಕುರುಸೇನೆ ।
ಕಾಯಬೇಕೆಂದೆನುತ ವರಗಾಂ
ಗೇಯ ಚಾಪವ ತುಡುಕಿ ಬೆರಳಲಿ
ಸಾಯಕವ ತೂಗುತ್ತ ತಡೆದನು ಪಾರ್ಥನುರವಣೆಯ ॥ ೩೯

ಪೂತುರೇ ಕಲಿಪಾರ್ಥ ಭುವನ
ಖ್ಯಾತನಾದ್ಯೆ ತಂದೆ ದ್ರೋಣನ
ಸೂತಸುತಕೃಪಗುರುತನೂಜರ ಗೆಲಿದೆ ಬಳಿಕೇನು ।
ಬೀತುದೇ ನಿಮ್ಮವಧಿ ಕುರುಬಲ
ಜಾತವನು ಗೆಲಿದಿನ್ನು ನಿಮ್ಮಯ
ಭೂತಳವ ಬಯಸುವಿರೆ ನೀವೆನುತೆಚ್ಚನಾ ಭೀಷ್ಮ ॥ ೪೦

ನಿಮ್ಮ ಕಾರುಣ್ಯಾವಲೋಕನ
ವೆಮ್ಮ ಸಿರಿ ಬೇಱಿಲ್ಲ ಕಾಳಗ
ದಮ್ಮುಗೆಯ ವಿಕ್ರಮದ ವಿವರಣ ವಿದ್ಯೆ ಫಲಿಸುವುದೆ ।
ಬಿಮ್ಮು ಬೀಸರವಹುದೆ ನಿಮ್ಮಯ
ಸೊಮ್ಮಿನವರಿಗೆ ಬೇಱೆ ರಾಜ್ಯದ
ಹೆಮ್ಮೆ ತಮಗೇಕೆನುತ ಕೈಯೊಡನೆಚ್ಚನಾಪಾರ್ಥ ॥ ೪೧

ಎಸಲು ಪಾರ್ಥನ ಬಾಣವನು ಖಂ
ಡಿಸುತ ಸೂತನನೆರಡಱಲಿ ಕೀ
ಲಿಸಿದನೈದಂಬಿನಲಿ ಹನುಮನ ಹಣೆಯನೊಡೆಯೆಚ್ಚ ।
ನಿಶಿತಶರವೆಂಟಱಲಿ ಕವಚವ
ಕುಸುರಿದಱಿದನು ನರನ ವಕ್ಷದ
ಬೆಸುಗೆ ಬಿಡೆ ಮೂಱಂಬಿನಲಿ ಮುಱಿಯೆಚ್ಚು ಬೊಬ್ಬಿಱಿದ ॥

ಮತ್ತೆ ಗಂಗಾಸೂನು ಪಾರ್ಥನ
ತೆತ್ತಿಸಿದನೈದಂಬಿನಲಿ ರಥ
ಕಿತ್ತು ಮುರಳಲು ಮೂಱು ವಜ್ರಾಸ್ತ್ರದಲಿ ಕೀಲಿಸಿದ ।
ಹುತ್ತನುರಗನು ಬಗಿದು ಹೊಗುವವೊ
ಲುತ್ತರಿಸಿದವು ಶರವಿಸರ ಧೃತಿ
ವೆತ್ತು ಫಲುಗುಣನವರನೆಚ್ಚನು ಹತ್ತು ಬಾಣದಲಿ ॥ ೪೩

ನರನ ಶರದಲಿ ಭೀಷ್ಮನೆದೆ ತನು
ಬಿರಿದು ವ್ಯೆ ಝೊಂಪಿಸುತ ಸಲೆ ತರ
ಹರಿಸಲಱಿಯದೆ ಮಲಗಿ ನಿಂದನು ರಥದ ಕಂಬುಗೆಯ ||
ಅರರೆ ಸೋತನು ಭೀಷ್ಮನಿನ್ನೇ
ನುರಿದುದೋ ಕುರುಸೇನೆ ಸಿಲುಕಿದ
ದೊರೆಯೆನುತ ಬಾಯ್ವಿಡಲು ಕೌರವರಾಯ ಹೊಱವಂಟ || ೪೪

ಬಾಲವೃದ್ಧರ ವಿಪ್ರರನು ನೀ
ಕಾಳಗದೊಳೋಡಿಸಿದೆನೆಂದೀ
ಮೇಲು ಮೂಗಿನೊಳಿರಲಿದೇನೈ ಪಾರ್ಥ ಮರುಳಾದೈ |
ಆಳಿದಡವಿಯ ರಾಜ್ಯವಲ್ಲದೆ
ಮೇಲೆ ಧರಣಿಯ ಬಯಸಿದಡೆ ನಿಮ
ಗಾಳಲೀವೆನೆ ಹೋಗು ಹೋಗಾರಣ್ಯಕೆನುತೆಚ್ಚ || ೪೫

ಗಾಱುಗೆಡೆಯದಿರೆಲವೊ ಸತ್ಯವ
ಮೀಱಲಮ್ಮದೆ ಲೋಕ ನಿನ್ನನು
ದೂಱಬೇಕೆಂದಡವಿಯೊಕ್ಕೆವು ಹೊಲ್ಲೆಹೇನಿದಕೆ |
ಹಾಱಿ ಹೋಯಿತ್ತವಧಿಯಿನ್ನೀ
ಮೀಱಿ ಗಳಹುವ ನಿನ್ನ ಗಂಟಲ
ನೂಱಿ ರಾಜ್ಯವ ಕೊಳುವೆ ಸೈರಿಸೆನುತ್ತ ನರನೆಚ್ಚ || ೪೬

ಅಱಿಯೆ ನೀನೆಲೆ ಮರುಳೆ ಗರುಡನ
ತಱವಱಿಕೆಯಲಿ ಹಾವು ಕನ್ನವ
ಕೊಱೆದು ಬದುಕುವುದೇ ವೃಥಾ ಕಕ್ಕುಲಿತೆಯೇಕಿನ್ನು |
ತಱಿದು ತಿಱಿಕಲ್ಲಾಡುವೆನು ನಿ
ಮ್ಮುಱುವರೈವರ ಶಿರವನರ್ಜುನ
ಬಱಿದೆ ಗಳಹದಿರೆನುತ ಕೌರವರಾಯ ತೆಗೆದೆಚ್ಚ || ೪೭

ಗರುಡ ನೀನಹೆ ನಿನ್ನ ಪಕ್ಕವ
ನೊರಸಿ ಹೆಡತಲೆಗಡರಿ ಬೆನ್ನೆಲು
ಮುಱಿಯೆ ದುವ್ವಾಳಿಸುವ ಮುರರಿಪು ಎನ್ನ ನೀನಱಿಯಾ ।
ತರಹರಿಸು ಕಲಿಯಾಗುಯೆಂದ
ಬ್ಬರಿಸಿ ಕೌರವನೆದೆಯನಗುಳಿದ
ನೆರಡುಬಾಣದಲರುಣಜಲದೊಱತೆಗಳ ಕಾಣಿಸಿದ ॥ ೪೮

ಅವನ ಭಾರಿಯ ವಲ್ಲಿ ಸೀರೆಗ
ಳವಯವದ ರಕುತದಲಿ ತೋದವು
ಜವವಳಿದು ಸಾರಥಿಗೆ ಸೂಚಿಸೆ ರಥವ ಮರಳಿಚಿದ ।
ಕವಿದನರ್ಜುನನೋಡದಿರು ಕೌ
ರವ ಪಲಾಯನವಕಟಕಟ ಪಾ
ರ್ಥಿವರ ಪಂಥವೆ ಮರಳಿ ನಿಂದಿರು ಕೊಲುವುದಿಲ್ಲೆಂದು ॥ ೪೯

ಹುರುಳುಗೆಟ್ಟುದು ಗರುವತನವೆಂ
ದರಸ ನಾಚಿದನಧಿಕ ಧೈರ್ಯೋ
ತ್ಕರುಷದಲಿ ಕಲಿಯಾಗಿ ನಿಂದನು ಮತ್ತೆ ಕಾಳಗಕೆ ।
ದೊರೆಯ ದುಗುಡವ ಕಂಡು ತಮತಮ
ಗುರವಣಿಸಿದರು ಸಕಲ ಸುಭಟರು
ಹೊರಳಿಗಟ್ಟಿತು ಸೇನೆ ನಿಚ್ಚಟರಳಿವ ನಿಶ್ಚೈಸಿ ॥ ೫೦

ಅಂಗವಿಸಿತರಿಸೇನೆ ಲೋಕವ
ನುಂಗಿ ಕುಣಿಯಲು ಬಗೆವ ಭರ್ಗನ
ರಂಗಭೂಮಿಯ ತೊಳೆವ ಜಲಧಿಯ ಜೋಕೆಯಂದದಲಿ ।
ಭಂಗಿತರು ಮಱುವಲಗೆಯಲಿ ಸ
ರ್ವಾಂಗ ದಳ ಜೋಡಿಸಿತು ನಮ್ಮಾಳಿ
ವಿಂಗೆ ಹದನೇನೆನುತ ಮತ್ಸ್ಯನ ಸೂನು ಚಿಂತಿಸಿದ ॥ ೫೧

ನೆರೆದ ತಿಮಿರದ ಥಟ್ಟು ಸೂರ್ಯನ
ತೆರಳಿಚುವವೊಲು ಮೇಘ ಘಟೆಗಳ
ಮುರಿದ ಮೋಹರವವುಕಿ ಪವನನ ಸೆಱಗ ಹಿಡಿವಂತೆ ।
ತೆರಳದೊತ್ತಂಬರಿಸಿ ತನ್ನಯ
ಶರದೊಳಗ್ಗದ ಹೆಣನ ತುಳಿದ
ಬ್ಬರಿಸಿ ಬರೆ ಸಮ್ಮೋಹನಾಸ್ತ್ರವ ಹೂಡಿದನು ಪಾರ್ಥ ॥ ೫೨
ಎಸಲು ಸಮ್ಮೋಹದ ಶರ ಪಸ
ರಿಸಿತು ಬಲದಲಿ ಬಹುಲ ನಿದ್ರಾ
ವ್ಯಸನ ವಿಹ್ವಲಿತಾಂತರಂಗರು ವೈಯ್ಯನೊಲೆದೊಲೆದು ।
ಉಸಿರು ಸಂಚದ ನಾಡಿಯುವಗಾ
ಹಿಸಲು ತೊಱೆದರು ವೈಮಱೆದು ತಲೆ
ಮುಸುಕಿನಲಿ ಬಲ ತೆಕ್ಕೆಗೆಡೆದುದು ಕೂಡೆ ಕಳವಳಿಸಿ ॥ ೫೩
ಸರಳ ಸೊಕ್ಕವಗಡಿಸೆ ಕೃಪ ವೈ
ಮಱೆದನತ್ತಲು ದ್ರೋಣನಿತ್ತಲು
ಪರಮನಿದ್ರಾಸಕ್ತನಾದನು ತನ್ನ ಮಗನೊಡನೆ ।
ಕರದ ಬಿಲು ನಸು ಸಡಿಲೆ ಕರ್ಣನು
ಮಱೆದನತ್ತಲು ರಥದೊಳಿತ್ತಲು
ದುರುಳ ದುರ್ಯೋಧನನೊಡನೆ ವೈಮಱೆದುದಾ ಸೇನೆ ॥ ೫೪
ಇಳಿದು ದ್ರೋಣನ ಚರಣಕಮಲಂ
ಗಳಿಗೆ ತನ್ನಯ ನೊಸಲ ಚಾಚಿದ
ನಳವಿಯಲಿ ಭೀಷ್ಮಂಗೆ ವೈಯ್ಯಿಕ್ಕಿದನು ರಥದೊಳಗೆ ।
ಸುಳಿದು ಕರ್ಣನ ಮಕುಟಪಟ್ಟಿಯ
ಸೆಳೆದು ದುರ್ಯೋಧನನ ವಸ್ತ್ರವ
ಸುಲಲಿತಾಭರಣವನು ನೀ ತೆಗೆಯೆಂದನುತ್ತರಗೆ ॥ ೫೫

ಧರಣಿಪಾಲನ ಮುಕುಟವನು ಕ
ತ್ತರಿಸಿ ದುಶ್ಶಾಸನನ ಘನಮಣಿ
ಸರದ ರತ್ನವನುಡಿದು ಭೂರಿಶ್ರವ ಜಯದ್ರಥರ ।
ಹೊರಳಿಚಿದನು ವಿಶೋಕಕುವರರ
ಹುರುಳುಗೆಡಿಸಿದನಖಿಳರಾಜರ
ಶಿರಕೆ ಭಂಗವ ಹೊಱಿಸಿ ಫಲುಗುಣನಡರಿದನು ರಥವ ॥ ೫೬

ಫಲುಗುಣನ ನೇಮದಲಿ ರಥದಿಂ
ದಿಳಿದನುತ್ತರನವನಿಪನ ಕೋ
ಮಲ ಸುವಸ್ತ್ರಾಭರಣವನು ಕರ್ಣಕೃಪಗುರುಸುತರ ।
ಸುಲಲಿತಾಂಬರ ರತ್ನಭೂಷಂ
ಗಳನು ಕೊಂಡಡರಿದನು ರಥವನು
ಬಿಲುದುಡುಕಿ ಗಾಂಗೇಯನಡಹಾಯ್ದನು ಧನಂಜಯನ ॥ ೫೭

ಎರಡು ಶರದಲಿ ಚಾಪವನು ಕ
ತ್ತರಿಸಿ ಭೀಷ್ಮನ ಕಡುಹ ನಿಲ್ಲಿಸಿ
ಧರಣಿಪಾಲನ ಮುಕುಟವನು ಮೂಱಂಬಿನಲಿ ಕಡಿದು ।
ತಿರುಗಿದನು ಕಲಿಪಾರ್ಥ ನಗುತು
ತ್ತರಸಹಿತ ಬನ್ನಿಯಲಿ ಕೈದುವ
ನಿರಿಸಿ ಮುನ್ನಿನ ರಥವ ಜೋಡಿಸಿ ನಗರಿಗೈತಂದ ॥ ೫೮

---

## ೭. ಪರಮಯತಿ ಕಾಯಿಡನು ಕೈಯಲಿ ತುಂಬಿ ರಕುತವನು

ಬಳಿಕ ಫಲುಗುಣನಿತ್ತಲಾಮರ
ದೊಳಗೆ ಕೈದುವನಿರಿಸಿ ಮುನ್ನಿನ
ಹುಲುರಥವ ಮೇಳೈಸಿ ಸಾರಥಿತನವನಳವಡಿಸೆ ।
ಇಳಿದು ಪಾರ್ಥನ ವೈದಡವಿ ಕಪಿ
ಕುಲಲಲಾಮನು ಬೀಳುಕೊಂಡನು
ಹೊಳಲ ಹೊರೆಯಲಿ ನಿಂದು ನರನುತ್ತರನೊಳಿಂತೆಂದ ॥ ೧

ಕರೆದು ದೂತರಿಗಱುಹು ನೀನೇ
ಧುರವ ಜಯಸಿದೆನೆಂದು ನಾವಿ
ದ್ದಿರವನಿಂದಱುಹದಿರು ಪಸರಿಸು ನಿನ್ನ ವಿಕ್ರಮವ ।
ಅರಸ ನಿನ್ನನೆ ಮನ್ನಿಸಲಿ ಪುರ
ಪರಿಜನಂಗಳು ನಿನ್ನ ವಿಜಯದ
ಹರುಷದಲಿ ಹೆಚ್ಚಿರಲಿ ನೇಮಿಸಿದಂತೆ ಮಾಡೆಂದ ॥ ೨

ಎನಲು ನೀನೇ ಬಲ್ಲೆ ಸರಿ ಲೇ
ಸೆನುತ ದೂತರ ಕರೆದು ಮತ್ಸ್ಯನ
ತನಯ ಕೌರವದಳವ ಜೈಸಿದನೆಂದು ಹೇಳುವುದು ।
ಜನಪನಲ್ಲಿಗೆ ಹೋಗಿಯೆಂದೀ
ತನು ನಿಯಾಮಿಸುತಿದ್ದನತ್ತಲು
ಜನಪ ಕುಂತೀಸುತರುಸಹಿತೈತಂದನರಮನೆಗೆ ॥ ೩

ಅರಮನೆಯ ಹೊಕ್ಕವನಿಪತಿಯು
ತ್ತರನ ಕಾಣದೆ ಕಂದನೆತ್ತಲು
ಸರಿದನೆನೆ ರಾಣಿಯರು ಬಿನ್ನೈಸಿದರು ಭೂಪತಿಗೆ ।
ಕುರುಬಲವನಂಗೈಸಿದನು ಉ
ತ್ತರೆಯ ಗುರು ಸಾರಥಿತನವನನು
ಕರಿಸಿದನು ಕೆಲಬಲನ ಹಾರದೆ ಕದನಕೈದಿದನು ॥ ೪
ಎಂದಡೊಡಲೊಳು ಕೂರಲಗು ಮುರಿ
ದಂದದಲಿ ಕಳವಳಿಸಿದನು ಮನ
ನೊಂದನಕಟ ಕುಮಾರನೆತ್ತಲು ರಾಯದಳವೆತ್ತ ।
ಬಂದವರು ಭೀಷ್ಮಾದಿಗಳು(ಮಿಗೆ
ನಿಂದು ತರಹರಿಸುವಡೆ ತಾನೇ
ನಿಂದುಧರನೇ ಮರುಳಲಾ ಮಗನೆಂದು ಚಿಂತಿಸಿದ ॥ ೫
ಮಗಗೆ ಪಡಿಬಲವಾಗಿ ಬಲುಮಂ
ತ್ರಿಗಳನವನಿಪ ಬೀಳುಕೊಟ್ಟನು
ದುಗುಡದಿಂದಿರೆ ಹೊಳಲ ಕೈಸೂಜಿಗಳ ಕಳಕಳದ ।
ಮೊಗದ ಹರುಷದಲಖಿಳದೂತಾ
ದಿಗಳು ಬಂದರು ಗುಡಿಯ ಕಟ್ಟಿಸು
ನಗರಿಯಲಿ ಕಳುಹಿದಿರುಗೊಳಿಸು ಕುಮಾರಕನನೆನುತ ॥ ೬
ರಾಯಕುವರ ಪಿತಾಮಹನು ರಿಪು
ರಾಯಕುವರಮುರಾರಿ ಕೌರವ
ರಾಯಥಟ್ಟುವಿಭಾಡನರಿರಾಜಗಜಪಂಚಮುಖ ।
ಜೀಯ ಬಿನ್ನಹ ಕರ್ಣ ಗುರು ಗಾಂ
ಗೇಯ ಮೊದಲಾದಖಿಳಕೌರವ
ರಾಯದಳವನು ಗೆಲಿದನುತ್ತರ ತುರುವ ಮರಳಿಚಿದ ॥ ೭

ಕೇಳಿ ಮಿಗೆ ಹಿಗ್ಗಿದನು ತನುರೋ
ಮಾಳಿ ತಳಿತುದು ಬಹುಳ ಹರುಷದ
ದಾಳಿಯಲಿ ಮನಮುಂದುಗೆಟ್ಟುದು ಕಂಗಳರಳಿದವು ।
ಲಾಲಿಸುತ ಸರ್ವಾಂಗ ಹರುಷದೊ
ಳಾಳೆ ಜನಪ ಪಸಾಯತವ ದೂ
ತಾಳಿಗಿತ್ತನು ಸುಲಿದರವದಿರು ರಾಯನೋಲಗವ ॥ ೮

ಕವಿದು ನೂಕುವ ಹರುಷವನು ಸಂ
ತವಿಸಲಱಿಯದೆ ಕಂಕ ನಿನ್ನೊಡ
ನೆವಗೆ ವಿಮಲದ್ಯೂತಕೇಳಿಗೆ ಚಿತ್ತವಾಯ್ತೆನಲು ।
ಅವನಿಪತಿ ಕೇಳ್ ಜೂಜಿನಲಿ ಪಾಂ
ಡವರು ಸಿಲುಕಿದರವರ ವಿಧಿಯನು
ಭುವನದಲಿ ನವೆದವರದಾರೆಂದನು ವಿರಾಟಂಗೆ ॥ ೯

ಆವರು ರಾಜ್ಯವನೊಡ್ಡಿ ಸೋತವೊ
ಲೆವಗೆ ಪಣ ಬೇಱಿಲ್ಲ ಹರುಷೋ
ತ್ಸವ ಕುಮಾರಾಭ್ಯುದಯ ವಿಜಯಶ್ರವಣ ಸುಖ ಮಿಗಲು ।
ಎವಗೆ ಮನವಾಯ್ತೊಡ್ಡು ಸಾರಿಯ
ನಿವಹವನು ತೆಗೆಯೆನಲು ಹೂಡಿದ
ನವನಿಪತಿ ನಸುನಗುತೆ ಹಾಸಂಗಿಗಳ ಪ್ರಾಯ್ಕಿದನು ॥ ೧೦

ಕೇಳಿ ಸಮತಳಿಸಿತ್ತು ಮತ್ಸ್ಯನೃ
ಪಾಲನೆಂದನು ಕಂಕ ನೋಡೈ
ಕಾಳಗವನುತ್ತರನು ಗೆಲಿದನು ರಾಯಘಟ್ಟಿಸಲಿ ।
ಶೂಲಪಾಣಿಗೆ ಸೆಡೆಯದಹಿತ ಭ
ಟಾಳಿ ಸೋತುದು ದಿವಿಜನರರೊಳು
ಹೋಲುವವರುಂಟೇ ಕುಮಾರನ ಹೇಳು ಹೇಳೆಂದು ॥ ೧೧

ಸೋತುದುಂಟರಿಸೇನೆ ಸುರಭಿ
ವ್ರಾತ ಮರಳಿದುದುಂಟು ಗೆಲವಿದು
ಕೌತುಕವಲೇ ಬಗೆಯಲದುಭುತವೆನ್ನ ಚಿತ್ತದಲಿ ।
ಮಾತು ಹೋಲುವೆಯಹುದು ಜಗವಿ
ಖ್ಯಾತ ಸಾರಥಿಯಿರಲು ಕುವರಗೆ
ಭೀತಿ ತಾನೆಲ್ಲಿಯದು ತಪ್ಪೇನೆಂದನಾ ಕಂಕ ॥ ೧೨
ಎಲೆ ಮರುಳೆ ಸಂನ್ಯಾಸಿ ಮತ್ಸರ
ದೊಳಗೆ ಮುಳುಗಿದ ಚಿತ್ತ ನಿನ್ನದು
ಗೆಲುವಿನಲಿ ಸಂದೇಹವೇ ಹೇಳಾವುದದುಭುತವು ।
ಅಳುಕುವವನೆ ಕುಮಾರ ಸಾರಥಿ
ಬಲುಹನುಳ್ಳವನೇ ಬೃಹಂದಳೆ
ಯಲಿ ನಿರಂತರಪಕ್ಷವೆಂದು ವಿರಾಟ ಖತಿಗೊಂಡ ॥ ೧೩
ನಿನ್ನ ಮೋಹದ ಕಂಗಳಿಗೆ ಸುತ
ನುನ್ನತೋನ್ನತಸತ್ವನೆಂದೇ
ಮುನ್ನ ತೋಱಿತು ಹೊಲ್ಲೆಹವೆ ಸಾಂಸಾರಿಕಭ್ರಮೆಗೆ ।
ಇನ್ನು ಬಗೆ ಗೆಲಿದವ ಬೃಹಂದಳೆ
ನಿನ್ನ ಮಗಗಳುಕುವರೆ ಭೀಷ್ಮರು
ಕರ್ಣ ಗುರುಕೃಪ ಗುರುತನೂಭವರೆಂದನಾ ಕಂಕ ॥ ೧೪
ಎನಲು ಖತಿಯೇಱಿದನು ಹಲು ಹಲು
ದಿನುತೆ ಕಂಗಳೊಳುರಿಯುಸುಗುಳುತ
ಕನಲಿ ಬಿಗಿದೌಡೊತ್ತಿ ಕನಕದ ಸಾರಿಯನು ನೆಗಹಿ ।
ಜನಪತಿಯ ಹಣೆಯೊಡೆಯಲಿಡೆ ಚಾ
ಜಿನ ಗಿರಿಯ ನಿರ್ಜರದವೊಲು ಭೋಂ
ಕೆನಲು ರುಧಿರದ ಧಾರೆ ಚಿಮ್ಮಿತು ಸಿರದ ಸೆರೆಯೊಡೆದು ॥ ೧೫

ಸೈರಿಸುತ ಯಮಸೂನು ರಕ್ತದ
ಧಾರೆಯನು ಕೈದುಂಬಿ ಹಿಡಿದತಿ
ಧೀರನೋರೆಯ ನೋಟದಲಿ ಸೈರಂಧ್ರಿಯನು ಕರೆಯೆ ।
ನಾರಿ ಹರಿತಂದಕಟ ನೊಂದನು
ಕಾರಣಿಕ ಸನ್ಯಾಸಿಯೆನುತ ನಿ
ಕಾರಿಸುತ ಸೆಜಗಿನಲಿ ತೊಡೆದಳು ಬಹುಳಶೋಣಿತವ ॥ ೧೬
ಮಡದಿ ಕರಪಲ್ಲವದೊಳೊರಸಿದ
ಳಡಿಗಡಿಗೆ ಹಣೆಯನು ಕಪೋಲವ
ತೊಡೆದು ತೊಳೆದಳು ಮುಖವನಿದನವ ಕಂಡು ಬೆಱಗಾಗಿ ।
ಹಿಡಿದೆ ರಕ್ತವನೇಕೆ ಕಾಮಿನಿ
ನುಡಿ ನಿದಾನವನೀತನೊಂದರೆ
ಮಿಡುಕಲೇತಕೆ ನೀನೆನುತ ದ್ರೌಪದಿಯ ಬೆಸಗೊಂಡ ॥ ೧೭
ಉರಿದು ಹೋಹುದು ನಿನ್ನ ರಾಜ್ಯದ
ಸಿರಿಯು ಬದಃಕಿತಿದೊಂದು ಬ್ರೋಳದೆ
ಪರಮಯತಿ ಕಾಯಿದನು ಕೈಯಲಿ ತುಂಬಿ ರಕುತವನು ।
ಅರಸ ಕೇಳೀ ಮುನಿಯ ನೆತ್ತರು
ಧರೆಯೊಳೊಕ್ಕಡೆ ಯಾಪ್ರದೇಶವ
ನೊರಸಿ ಕಳೆವುದು ಕಲಿಬೃಹಂದಳೆಗೇಱಿಸಿದ ಬಿರುದು ॥ ೧೮
ಈಕೆ ಯಾರಿವರಾರು ನಾಟ್ಯ
ವ್ಯಾಕರಣ ಪಂಡಿತ ಬೃಹಂದಳೆ
ಯೇಕೆ ಇವರೇಕಱಿಯಬಾರದು ಕಾಲುಕೀಲುಗಳ ।
ಏಕೆ ನಮಗೀಚಿಂತೆಯೆಂದವಿ
ವೇಕಿಯಿರೆ ಬಳಿಕಿತ್ತ ಪುರದಲಿ
ನೂಕುನೂಕಾಯಿತ್ತು ನೋಡುವ ನೆರವಿಯುತ್ತರನ ॥ ೧೯

ಇದಿರುವಂದರು ಮಂತ್ರಿಗಳು ವರ
ಸುದತಿಯರು ಸೂಸಿದರು ಸೇಸೆಯ
ನುದಿತಮಂಗಳಘೋಷವಾದ್ಯನಿನಾದರಭಸದಲಿ ।
ವದನವಿದೆ ಕಳೆಗುಂದಿ ಜಯದ
ಭ್ಯುದಯ ತಾನೆಂತೆನುತ ವರ ಕೋ
ವಿದರು ತಮ್ಮೊಳಗಾಡುತಿರ್ದುದು ಕೂಡೆ ಗುಜುಗುಜುಸಿ ॥ ೨೦
ಲೀಲೆ ಮಿಗಲುತ್ತರನ ಪರಿಜನ
ಜಾಲ ಜೀಯೆನಲಿದಿರುವಂದ ನಿ
ವಾಳಿಗಳ ನೂಕಿದನು ಕೈವಾರಿಗಳ ಕೋಪಿಸುತ ।
ಆಲಿಯವನಿಯ ಬರೆಯೆ ಮುಸುಕಿನ
ಮೇಲುದುಗುಡದ ಭಾರದಲಿ ರಾ
ಜಾಲಯಕೆ ಬರಲಿದಿರುವಂದಪ್ಪಿದನು ನಂದನನ ॥ ೨೧
ಬಾ ಮಗನೆ ವಸುಕುಲದ ಚಿಂ
ತಾಮಣಿಯೆ ಕುರುರಾಯಮೋಹರ
ಧೂಮಕೇತುವೆ ಕಂದ ಬಾಯೆಂದಪ್ಪಿ ಕುಳ್ಳಿರಿಸೆ ।
ಕಾಮಿನಿಯರುಪ್ಪಾರತಿಗಳಭಿ
ರಾಮ ವಸ್ತ್ರನಿವಾಳಿ ರತ್ನ
ಸ್ತೋಮ ಬಣ್ಣದ ಸುಳಿವುಗಳೆಸೆದುವೊಗ್ಗಿನಲಿ ॥ ೨೨
ಬೊಪ್ಪ ಸಾಕೀ ಬಯಲ ಡೊಂಬಿನ
ಗೊಪ್ಪುವುದೆ ವೀರೋಪಚಾರವಿ
ದೊಪ್ಪುವರಿಗೊಪ್ಪುವುದು ತೆಗೆಸೆನ್ನುಲರಸ ನಸುನಗುತ ।
ದರ್ಪವುಳ್ಳರಿಗೀಸು ಮಂಗಳ
ವೊಪ್ಪದಿಹುದೇ ಜಗದೊಳಾವಂ
**ಗೊಪ್ಪುವುದು ಬಲವೀ ನಿಗರ್ವತೆ ಎಂದನಾಮತ್ಸ್ಯ ॥ ೨೩**

ಅದಟತನವೆಮಗುಂಟೆ ಬೆಂದುದ
ಬೆದಕಬೇಡೆಲೆ ತಂದೆ ಹಗಲಿನ
ಕದನವನು ಹರಿತನುಜ ಗೆಲಿದನು ಬೊಪ್ಪ ನುಡಿಸದಿರು ।
ಉದಯದಲಿ ಗೆಲಿದಾತನನು ನಿ
ಮ್ಮದಿರಿನಲಿ ತೋಱುವೆನು ಬೀಳ್ಕೊಡಿ
ಸದನಕೆಂದು ಕುಮಾರ ಕಳುಹಿಸಿಕೊಂಡನರಮನೆಗೆ ॥ ೨೪

ಇತ್ತಲರ್ಜುನದೇವ ಸಾರಿದ
ನುತ್ತರೆಯ ಭವನವನು ತಾ ತಂ
ದುತ್ತಮಾಂಬರ ವಿವಿಧ ರತ್ನಾಭರಣ ವಸ್ತುಗಳ ।
ಇತ್ತನಾ ಕನ್ನಿಕೆಗೆ ಮುದವಿಗ
ಲುತ್ತರೆಯ ಮನೆಯಿಂದ ಶಶಿಕುಲ
ಮತ್ತವಾರಣ ಬಂದನಾ ಭೀಮಾಗ್ರಜನ ಬಳಿಗೆ ॥ ೨೫

ಬಳಿಕ ಸಂಕೇತದಲಿ ಭೂಪನ
ನಿಳಯವನು ಕಲಿಭೀಮ ಹೊಕ್ಕನು
ನಳಿನಮುಖಿ ಸಹದೇವನಕುಲರು ಬಂದರಾಕ್ಷಣಕೆ ।
ಫಲುಗುಣನು ಪೊಡಮಟ್ಟನಿಬ್ಬರಿ
ಗುಳಿದವರು ಪಾರ್ಥಂಗೆ ವಂದಿಸ
ಲೊಲಿದು ಬಿಗಿಯಪ್ಪಿದರು ಸೋದರರೆಲ್ಲ ಹರುಷದೊಳು ॥ ೨೬

ಉಳಿದ ನಾಲ್ವರು ಕಲಿತ್ರಿಗರ್ತರ
ಗೆಲಿದ ಪರಿಯನು ಪಾರ್ಥ ಕೌರವ
ಬಲವ ಭಂಗಕೆ ತಂದ ಪರಿಯನು ಹೇಳುತಿರುತಿರಲು ।
ನಿಲುಕಿ ರಾಯನ ಹಣೆಯ ಗಾಯವ
ಬಳಿಕ ಕಂಡನಿದೇನು ನೊಸಲಿಂ
ದಿಳಿಯುತಿದೆ ತನಿರಕುತ ಬಿಂದುಗಳೆಂದನಾ ಪಾರ್ಥ ॥ ೨೭

ಅನವಧಾನದಲಾಯ್ತು ಸಾಕದ
ನೆನೆಯಲೇತಕೆ ಮಾಣೆನಲು ಮಿಗೆ
ಕನಲುತರ್ಜುನನಱಿದನಾ ದ್ರೌಪದಿಯ ಸೂರುಳಿಸಿ ।
ಮನದೊಳುರಿದೆದ್ದನು ವಿರಾಟನ
ತನುವ ಹೊಳ್ಳಿಸಿ ರಕುತವನು ಶಾ
ಕಿನಿಯರಿಗೆ ಹೊಯ್ಸುವೆನು ಹೊಲ್ಲಹವೇನು ಹೇಳೆಂದ ॥ ೨೮
ಕಳುಹಬೇಕೇ ಕೀಚಕೇಂದ್ರನ
ಬಳಗವಿದ್ದಲ್ಲಿಗೆ ವಿರಾಟನ
ನೆಲೆ ದುರಾತ್ಮಕ ಸಾರಿಯಲಿ ಹಣೆಯೊಡೆಯಲಿಟ್ಟನಲಾ ।
ನೆಲದೊಳೊಕ್ಕದೆ ರಕುತವವದಿರ
ಕುಲವನೊರಸುವೆನಿವನ ಸೀಳಿದು
ಬಲಿಯ ಕೊಡುವೆನು ಭೂತಗಣಕೆನುತಿದ್ದನಾ ಭೀಮ ॥ ೨೯
ಕಾಕಬಳಸಲು ಬೇಡ ಹೋ ಹೋ
ಸಾಕು ಸಾಕೈ ತಮ್ಮ ಮಾಣು
ದ್ರೇಕವನು ನೆಲ ರಕುತಗಂಡಡೆ ನಿನ್ನ ಮೇಲಾಣೆ ।
ಈ ಕಮಲಲೋಚನೆಯ ಸೆಱಗಿಗೆ
ಸೇಕವಾದುದು ರಕುತದಲಿ ಸು
ವ್ಯಾಕುಲತೆ ಬೇಡೆಂದು ಭೀಮನ ಹಿಡಿದನಾ ಭೂಪ ॥ ೩೦
ಬಱಿಯ ಧರ್ಮದ ಜಾಡ್ಯದಲಿ ವೈ
ಮಱಿದು ಬನದಲಿ ಬೇರು ಬಿಕ್ಕೆಯ
ನಱಿಸಿ ತೊಳಲಿದು ಸಾಲದೇ ಹದಿಮೂಱು ವತ್ಸರವ ।
ಉಱುಕಗೊಂಡಡೆ ರಾಜತೇಜವ
ಮೆಱಿವ ದಿನವೆಂತಹುದು ನೀವಿ
ನ್ನಱಿಯಿರೆಮ್ಮನು ಹರಿಯಬಿಡಿ ಸಾಕೆಂದನಾ ಭೀಮ ॥ ೩೧

ಉದಯದಲಿ ನಾವಿನಿಬರಾತನ
ಸದನದಲಿ ನೃಪಪೀಠವನು ಗ
ರ್ವದೊಳು ನೆಮ್ಮುವೆವಾತ ನಿಮ್ಮೊಳು ಖಾತಿಯನು ಹಿಡಿಯೆ।
ಮದಮುಖನನೊರಸುವೆವು ಹರುಷದ
ಲಿದಿರುಗೊಂಡಡೆ ಮನ್ನಿಸುವೆವಿಂ
ತಿದುವೆ ಸಮ್ಮತವೆಂದು ಸಂತೈಸಿದನು ಸಹಭವನ॥ ೩೨

---

## ೮. ರಂಜಿಸಿದುದಭಿಮನ್ಯುವಿನ ವೈವಾಹ

ಕೇಳು ಜನಮೇಜಯ ಧರಿತ್ರೀ
ಪಾಲ ಚರಿತಾಜ್ಞಾತವಾಸವ
ಬೀಳುಕೊಟ್ಟರು ಬಹುಳ ಹರುಷದೊಳಿರುಳ ನೂಕಿದರು ।
ಮೇಲಣವರಭ್ಯುದಯವನು ಕೈ
ಮೇಳವಿಸಿ ಕೊಡುವಂತೆ ಮೂಡಣ
ಶೈಲ ಮುಖದಲಿ ಕೆಂಪು ಸುಳಿದುದು ಭಾನುಮಂಡಲದ ॥ ೧

ಏಳು ಕುದುರೆಯ ಖುರಪುಟದ ಕೆಂ
ದೂಳಿಯೋ ಕುಂತೀಕುಮಾರಕ
ರೇಳಿಗೆಯ ತನಿರಾಗರಸವುಬ್ಬರಿಸಿ ಪಸರಿಸಿತೋ ।
ಹೇಳಲರಿದೆನಲಮರವರದಿಗು
ಬಾಲಕಿಯ ಬೈತಲೆಯ ಕುಂಕುಮ
ಜಾಲವೋ ಮೇಣೆನಲು ದಿನಪನ ಚೂಣಿ ರಂಜಿಸಿತು ॥ ೨

ಸರಸಿಜದ ಪರಿಮಳಕೆ ತುಂಬಿಯ
ವರವನಿತ್ತನು ಚಂದ್ರಕಾಂತಕೆ
ಬೆಳಗನಿತ್ತನು ಜಕ್ಕವಕ್ಕಿಯ ಸೆಜೆಯ ಬಿಡಿಸಿದನು ।
ಕೆರಳಿ ನೈದಿಲ ಸಿರಿಯ ಸೂಜೆಯ
ಶರಿಸಿದನು ರಿಪುರಾಯ ರಾಜ್ಯವ
ನೊರಸಿದನು ರವಿ ಮೂಡಣದ್ರಿಯಲಿತ್ತನೋಲಗವ ॥ ೩

ಹರ ಹರ ಶ್ರೀಕಾಂತ ಎನುತೈ
ವರು ಕುಮಾರಕರುಪ್ಪವಡಿಸಿ
ದರಿವಿನಾಶರು ಮಾಡಿದರು ಮಾಂಗಲ್ಯಮಜ್ಜನವ ।
ವರವಿಭೂಷಣ ಗಂಧ ಮಾಲ್ಯಾಂ
ಬರಪರಿಷ್ಕೃತರಾದರವನೀ
ಸುರರಿಗಿತ್ತರು ಸುರಭಿಮಣಿ ಕನಕಾದಿವಸ್ತುಗಳ ॥ ೪

ತಮದ ಗಂಟಲನೊದೆದು ಮೂಡುವ
ದ್ಯುಮಣಿಮಂಡಲದಂತೆ ಜೀವ
ಭ್ರಮೆಯ ಕವಚವ ಕಳೆದು ಹೊಳೆ ಹೊಳೆವಾತ್ಮನಂದದಲಿ ।
ವಿಮಳ ಬಹುಳ ಕ್ಷತ್ರರಶ್ಮಿಗ
ಳಮಮ ದೆಸೆಗಳ ಬೆಳಗೆ ರಾಜೋ
ತ್ತಮ ಯುಧಿಷ್ಠಿರದೇವನೆಸೆದನು ರಾಜತೇಜದಲಿ ॥ ೫

ಪರಮಸತ್ಯವ್ರತಮಹಾಕ್ರತು
ವರದಲವಭೃತಮಜ್ಜನವ ವಿ
ಸ್ತರಿಸಿ ಭೀಮಾದಿಗಳು ಸಹಿತ ವಿರಾಟನರಮನೆಗೆ ।
ಅರಸ ಬಂದನು ಮಣಿಖಚಿತ ಕೇ
ಸರಿಯ ಪೀಠವನಡರಿದನು ನಿಜ
ಚರಣ ಸೀಮೆಯೊಳಸೆದರೊಡಹುಟ್ಟಿದರು ಪರುಠವಿಸಿ ॥ ೬

ಅವನಿಪನ ಸಿಂಹಾಸನವನೀ
ಱುವ ಸುಗರ್ವಿತರಾರು ನೋಡಿದ
ಡೆವೆಗಳುರಿಯವೆ ನೂಕೆನುತ ಕಂಚುಕಿಗಳೈತಂದು ।
ಇವರ ವಿಮಲಕ್ಷತ್ರತೇಜವ
ನವಗಡಿಸಲಂಜಿದರು ಹರಿತಂ
ದಿವದಿರೆಬ್ಬಿಸಿ ಬಿನ್ನವಿಸಿದರು ಮತ್ಸ್ಯಭೂಪತಿಗೆ ॥ ೭

ಕರಸಿದನು ಪೌರೋಹಿತರರನು
ತ್ತರನನಖಿಳಮಹಾಪ್ರಧಾನರ
ನರಮನೆಯ ಹೊಱವಂಟನೋಲಗಶಾಲೆಗೈತಂದು ।
ತಱಿದು ಕೇಸಿದ ಚಂದ್ರಬಿಂಬದ
ಕಿರಣಲಹರಿಗಳೆನಲು ವಿಮಳಾ
ಭರಣ ರತ್ನಪ್ರಭೆಯ ಕಂಡನು ನೃಪತಿ ದೂರದಲಿ ॥ ೮
ಹರನ ನಾಲಕುಮುಖದ ಮಧ್ಯ
ಸ್ಫುರಿತದೀಶಾನನವೊಲಾಸೋ
ದರ ಚತುಷ್ಟಯ ಮಧ್ಯದಲಿ ಕಂಡನು ಯುಧಿಷ್ಠಿರನ ।
ಅರಸಿಯನು ವಾಮದಲಿ ವಿವಿಧಾ
ಭರಣ ಮಣಿ ರಶ್ಮಿಗಳ ಹೊದಱಿನ
ಹೊರಳಿಯಲಿ ಕಣ್ಣಾಲಿ ಕೋರೈಸಿದವು ಪರಿಜನಕೆ ॥ ೯
ವಲಲ ಕಂಕ ಬೃಹಂದಳೆಯ ವ್ಯಾ
ಸುಳಿವ ಹೋಲುವರೆಂದು ಕೆಲಬರು
ಕೆಲರಿದೆತ್ತಣ ನರರು ತೆಗೆ ಸುರಲೋಕಪಾಲಕರು ।
ತಿಳಿಯಲರಿದಿದನೆಂದು ಕೆಲಬರು
ತಳವೆಳಗುಗೊಳುತಿರಲು ಮಂದಿಯ
ತೊಲಗ ನೂಕಿಸಿ ತಂದೆಗುತ್ತರ ನಗುತಲಿಂತೆಂದ ॥ ೧೦
ತಾತ ಬಿನ್ನಹ ನಿನ್ನ ವೈರಿ
ವ್ರಾತವನು ಗೆಲಿದಾತನಾತೋ
ಪಾರ್ಥನಾತನ ಮುಂದೆ ಮೆಱೆವವ ಕೀಚಕಾಂತಕನು ।
ಈತ ನಕುಲನು ಕೆಲದಲೀತೋ
ಪಾರ್ಥ ಸಹದೇವಾಂಕನಿಬರಿ
ಗಾತ ಹಿರಿಯನು ಧರ್ಮನಂದನನೆಂದು ತೋಱಿಸಿದ ॥ ೧೧

ರಮಣಿಯೈವರಿಗೀಕೆ ಕೆಲದಲಿ
ಕಮಲಮುಖಿ ಪಾಂಚಾಲಿ ತಾವೀ
ವಿಮಲಗುಣರಾಮಾಭಿರಾಮರು ಪಾಂಡುನಂದನರು।
ನಿಮಗೆ ಭಾರಿಯ ಭಾಗ್ಯಲಕ್ಷ್ಮಿಯು
ಮಮತೆ ಕೈಸಾರಿದುದು ನೃಪಪದ
ಕಮಲದಲಿ ಬೀಳುವೆವು ನಡೆ ನಡೆ ಧನ್ಯರಾವೆಂದ ॥ ೧೨
ಈತನೇ ಧರ್ಮಜನು ದಿಟ ತಾ
ನೀತನೇ ಪವನಜನು ನಿಶ್ಚಯ
ವೀತನೇ ಫಲುಗುಣನು ಮಾದ್ರೀತನಯರೀ ಇವರು।
ಈ ತಳೋದರಿ ದ್ರುಪದ ಸುತೆಯೀ
ಕೌತುಕವಲಾ ಭುವನಜನವಿ
ಖ್ಯಾತರೆಲ್ಲಿಂದೆಲ್ಲಿ ಮೂಡಿದರೆಂದು ಬೆಱಗಾದ ॥ ೧೩
ದರುಶನಕೆ ಮಣಿಕನಕ ವಸ್ತುವ
ತರಿಸಿ ಮುದದಲಿ ಮುಳುಗಿ ನಿಜಪರಿ
ಕರಸಹಿತ ವೈಯ್ಯಿಕ್ಕಿದನು ಕಾಣಿಕೆಯನೊಪ್ಪಿಸುತ।
ವರನೃಪಾಲ ತ್ರಾಹಿ ಭುವನೇ
ಶ್ವರ ಪರಿತ್ರಾಯಸ್ವ ಕರುಣಿಸು
ಕರುಣಿಸೆಂದಂಘ್ರಿಗಳ ಹಿಡಿದನು ಮತ್ಸ್ಯಭೂಪಾಲ ॥ ೧೪
ಬಗೆದೆನಪರಾಧವನು ಕರುಣಾ
ಳುಗಳ ಬಲ್ಲಹ ನೀನು ನಿನ್ನಂ
ಘ್ರಿಗಳಿಗೀತಲೆ ನಂಟು ನೀನಿದ ಕಾಯಬೇಕೆನುತ।
ಮಿಗೆ ಭಕುತಿ ಭಾವದಲಿ ನಿಜಮಂ
ತ್ರಿಗಳು ಮಕ್ಕಳು ಸಹಿತ ಮನ ನಂ
ಬುಗೆಯ ಮೆಱೆದನು ಮತ್ಸ್ಯನೃಪತಿ ಮಹೀಶನಿದಿರಿನಲಿ ॥ ೧೫

ಆ ಸುಧೇಷ್ಣೆ ಕುಮಾರಿಯೊಡನೆ ವಿ
ಲಾಸಿನೀಜನವೆರಸಿ ರಾಣೀ
ವಾಸದಲ್ಲಿಗೆ ಬಂದು ಕಾಣಿಕೆಗೊಟ್ಟು ವೈಯ್ಯಿಕ್ಕೆ ।
ಆಸಕಲ ಪರಿವಾರ ಪುರಜನ
ದೇಶಜನ ದರುಶನವನಿತ್ತು ಮ
ಹೀಶನನು ಕೈಮುಗಿದು ಕಂಡುದು ಬಹುಳ ಹರ್ಷದಲಿ ॥ ೧೬
ಶಿರವನೆತ್ತಿ ವಿರಾಟಭೂಪನ
ಕರೆದು ಹತ್ತಿರ ಪೀಠದಲಿ ಕು
ಳ್ಳಿರಿಸಲೊಡೆಮುರಿಚಿದನು ಕೆಲದಲಿ ಗದ್ದುಗೆಗೆ ಸರಿದು ।
ಪರಮಸುಕೃತವಲಾ ಧರಾಧೀ
ಶ್ವರನ ದರುಶನವಾಯ್ತು ಧನ್ಯರು
ಧರೆಯೊಳೆಮ್ಮಿಂದಾರು ಭಾವಿಪಡೆಂದನಾ ಮತ್ಸ್ಯ ॥ ೧೭
ದೇಶ ನಿಮ್ಮದು ಸರ್ವರಾಜ್ಯದ
ಕೋಶ ನಿಮ್ಮದು ತನ್ನ ಜೀವವಿ
ಲಾಸ ನಿಮ್ಮದು ಸಲಿಸಬೇಹುದು ಬಿನ್ನಹದ ಹದನ ।
ಈ ಸಮಂಜಸ ದಿವಸದಲಿ ಸಿಂ
ಹಾಸನದಲಭಿಷೇಕವನು ಭೂ
ಮೀಶ ವಿಸ್ತರಿಸುವೆನು ಚಿತ್ತೈಸೆಂದನಾ ಮತ್ಸ್ಯ ॥ ೧೮
ಎನಲು ನಗುತೆಂದನು ಮಹೀಪತಿ
ವಿನಯ ಮಧುರರಸಾಭಿಷೇಕವ
ನೆನಗೆ ಮಾಡಿದೆ ಸಾಕು ಪುನರುಕ್ತಾಭಿಷೇಚನವೆ ।
ಜನವಿದೆಮ್ಮದು ನೀನದೆಮ್ಮಯ
ತನು ಧರಿತ್ರಿಯಿದೆಮ್ಮದೆಂಬೀ
ನೆನಹು ತಾನುಪಚಾರವಾಕ್ಯವಿದೆಂದನಾ ಭೂಪ ॥ ೧೯

ಎಂದಡುತ್ತರನರಸನಂಘ್ರಿಯೊ
ಳಂದು ಮಕುಟವ ಚಾಚಿ ಬಿನ್ನಹ
ವಿಂದು ನೇಮವ ಕೊಡಿ ಕುಮಾರಿಯನೀವೆನರ್ಜುನಗೆ ।
ಎಂದಡೇಳೇಳೆಂದು ನಸುನಗೆ
ಯಿಂದ ಪಾರ್ಥನ ನೋಡೆ ಕೈಮುಗಿ
ದೆಂದನಾತನು ಮನದ ನಿಶ್ಚಯವನು ಯುಧಿಷ್ಠಿರಗೆ ॥ ೨೦
ವರುಷವಿವಳಿಗೆ ನಾಟ್ಯವಿದ್ಯೆಯ
ಪರುಠವಿಸಿದೆನು ತಂದೆಯಂತಿರಿ
ತರುಣಿ ಭಜಿಸಿದಳಾಪ್ರಕಾರದ ಶಿಷ್ಯನಿಷ್ಠೆಯಲಿ ।
ಗುರುತನದ ಗರುವಾಯಿಗೆಟ್ಟೆ
ನ್ನರಸಿಯಾಗಲಿಯೆಂಬುದನುಚಿತ
ವರಕುಮಾರಿಯ ನೀವಡಭಿಮನ್ಯುವಿಗೆ ಕೊಡಿಯೆಂದ ॥ ೨೧
ಎವಗೆ ನೀವೇನಾತನೇನು
ತ್ಸವದೊಳಾಗಲಿಯೆನೆ ವಿರಾಟನ
ನವನಿಪತಿ ಮನ್ನಿಸಿದನಿತ್ತನು ನಗುತ ವೀಳೆಯವ ।
ಎವಗೆ ಪರಮಸ್ವಾಮಿ ಎಮ್ಮು
ತ್ಸವದ ನೆಲೆಯವ್ಯೈವರಸು ಯಾ
ದವ ಶಿರೋಮಣಿ ಕೃಷ್ಣನಭಿಮತವೆಮ್ಮ ಮತವೆಂದ ॥ ೨೨
ಪೊಡವಿಯೊಡೆತನವೆಮಗೆ ಮಿಗೆ ಕ
ಟ್ಟೊಡೆಯ ಕೃಷ್ಣನು ಕೃಷ್ಣನೊಡಬ
ಟ್ಟಡೆ ವಿವಾಹ ನಿರಂತರಾಯವು ಚಿಂತೆ ಬೇಡೆನಲು ।
ಒಡಬಡಲಿ ಮೇಣಿರಲಿ ಗುರು ನಿ
ಮ್ಮಡಿ ಮುರಾರಿಯ ತೋಳಿಸುವಿರಾ
ದಡೆ ಕೃತಾರ್ಥನು ತಾನೆನುತ ಹಿಗ್ಗಿದನು ಮತ್ಸ್ಯನೃಪ ॥ ೨೩

ಪರಿಪರಿಯ ಪಾವುಡವ ಕಟ್ಟಿಸಿ
ಹರುಷದಲಿ ಬಿನ್ನಹದಲೋಲೆಯ
ಬರಸಿದನು ವೇಗಾಪ್ತದೂತರನಟ್ಟಿದನು ನೃಪತಿ ।
ಚರರು ಪಯಣದ ಮೇಲೆ ಪಯಣದ
ಭರದೆ ಬಂದರು ಕೃಷ್ಣರಾಯನ
ಪುರಕೆ ಪರಿತೋಷದಲಿ ಕಂಡರು ರಾಜಮಂದಿರವ ॥ ೨೪

ಬರವ ಬಿನ್ನಹಮಾಡೆ ಪಡಿಹಾ
ರರು ಮುರಾರಿಯು ನೇಮದಲಿ ಚಾ
ರರನು ಹೊಗಿಸಲು ಬಂದು ಹೊಕ್ಕರು ಕೃಷ್ಣನೋಲಗವ ।
ದರುಶನವ ಮಾಡಿದರು ಚರಣಾಂ
ಬುರುಹದಲಿ ವ್ಯೈಯ್ಯಕ್ಕಿ ದೇವನ
ಹೊರೆಯಲಿರಿಸಿದರಿವರು ಕಳುಹಿದ ಬಿನ್ನವತ್ತಳೆಯ ॥ ೨೫

ನಸುನಗುತ ಮುರವೈರಿ ಮಿಗೆ ಮ
ನ್ನಿಸಿದನವರನು ಪಾಂಡುತನಯರ
ಕುಶಲವನು ದ್ರೌಪದಿಯ ಸುಕ್ಷೇಮವನು ಬೆಸಗೊಳಲು ।
ಕುಶಲರನಿಬರು ಜೀಯ ಭಕ್ತ
ವ್ಯಸನ ನಿಮ್ಮದು ಸುಖದಲುಜ್ಜೀ
ವಿಸಿದರನಿಬರು ನಿಮ್ಮಡಿಯ ಕರುಣಾಕಟಾಕ್ಷದಲಿ ॥ ೨೬

ಕೇಳಿದನು ಹರುಷದಲಿ ಕಡುಕರು
ಣಾಳು ಹೊಂಪುಳಿಯೋಗಿ ಬಕುತರ
ಮೇಲಿನೊಲವಿನ ಬಹಳ ಪರಮಸ್ನೇಹ ಪಸರಿಸಿತು ।
ಕೇಳಿದೆವೆ ಹರಹರ ಯುಧಿಷ್ಠಿರ
ನೇಳಿಗೆಯ ನಾ ಕೌರವೇಶ್ವರ
ನೂಳಿಗವನೆನುತಸುರರಿಪು ತೂಗಿದನು ನಿಜಶಿರವ ೨೭

(ಕಾಲಕ್ಕೆ ಗೂಡಿದಡೆ ಲೇಸಿನ
ಮೇಲೆ ಲೇಸುಗಳೊದಗುವವು) ಭೂ
ಪಾಲ ಕುಂತೀಸುತರ ಕಾಣಿಕೆ ಮೊದಲ ಮಂಗಳವು ||
ಮೇಲೆ ತಂಗಿಯ ಮಗನ ಮದುವೆ ವಿ
ಶಾಲಶುಭವಿದು ನಿಖಿಳಯಾದವ
ಜಾಲ ಪಯಣವ ಮಾಡಲೆಂದಸುರಾರಿ ನೇಮಿಸಿದ|| ೨೮
ಚರರಿಗುಡುಗೊರೆ ಗಂಧಪಖಿಳಾ
ಭರಣ ಕಪ್ಪುರ ವೀಳಯವನಿ
ತ್ತರಿದಿಶಾಪಟ ಬೀಳುಕೊಟ್ಟನು ರಾಯಸವ ಬರಸಿ |
ಮರಳಿ ದೂತರು ಬಂದು ಮತ್ಸ್ಯನ
ಪುರಪ ಹೊಕ್ಕರು ಕೃಷ್ಣರಾಯನ
ಕರುಣದಳತೆಯ ಬಿನ್ನವಿಸಿದರು ಪಾಂಡುತನಯರಿಗೆ || ೨೯
ಬಳಿಕ ಸುಮುಹೂರ್ತದಲಿ ಮತ್ಸ್ಯನ
ಹೊಳಲ ಹೊರವಂಟುತ್ತರಾಖ್ಯಾ
ವಳಯದಲಿ ರಚಿಸಿದರುಪಪ್ಲವ್ಯಾಖ್ಯಪುರವರವ |
ನೆಲನಗಲದಲಿ ಝಲ್ಲಿಪಟ್ಟೆಯ
ನಳವಡಿಸಿದರು ನಿಖಿಳನೃಪರಿಗೆ
ಬಳಿಯಲಟ್ಟಿದರುತ್ತರೋತ್ತರವಾದುದವರುದಯ|| ೩೦
ಕಟ್ಟಿದವು ಗುಡಿ ಮನೆಗಳೊಳು ಮೇ
ಲ್ಕಟ್ಟು ಬಿಗಿದವು ಪುರದ ನಾರಿಯ
ರಿಟ್ಟುತೊಟ್ಟರು ಕಳಸಕನ್ನಡಿಸಹಿತ ದೇಸಿಯಲಿ |
ಇಟ್ಟಣಿಸಿ ಗಜ ವಾಜಿ ರಥ ಸಾ
ಲಿಟ್ಟು ಹೊರವಡೆ ದನುಜರಾಯುಘ
ರಟ್ಟನನು ನಡೆದಿದಿರುಗೊಂಡರು ಪಾಂಡುನಂದನರು || ೩೧

ಹೊಳಹ ಮಿಗೆ ದೂರದಲಿ ಗರುಡನ
ಹಳವಿಗೆಯು ಕಂಡಂದಣಂಗಳ
ನಿಳಿದು ವೈಯಿಕ್ಕಿದರು ದ್ರುಪದವಿರಾಟಪಾಂಡವರು ।
ಬಳಿಕ ಭೂಪರು ಕಾಲುನಡೆಯಲಿ
ನಲಿದು ಬರುತಿರಲಾನೆಯಿಂದಿಳಿ
ಗಿಳಿದು ಬಿಜಯಂಗೈದನಸುರಾರಾತಿ ನಸುನಗುತ ॥ ೩೨
ಇತ್ತನಿವರಿಗೆ ಸಮಯವನು ಸುರ
ರುತ್ತಮನು ನಿಗಮೌಘವಱಸಿದ
ಡತ್ತಲತ್ತಲೆ ಸರಿವ ಮುನಿಗಳ ಮನಕೆ ವೈಗೊಡದ ।
ಹೆತ್ತಮಕ್ಕಳು ನಿಲಲಿ ಭಕ್ತರ
ನಿತ್ತ ಕರೆ ನೆನೆವರಿಗೆ ತನ್ನನು
ತೆತ್ತು ಬದುಕುವೆನೆಂಬ ಬೋಳೆಯರರಸ ನಡೆತಂದ ॥ ೩೩
ಎರಡು ಸೆರೆಯಲಿ ತುಂಬಿ ರತುನವ
ಸುರಿದು ವೈಯ್ಯಿಕ್ಕಿದನು ಭೂಪತಿ
ಚರಣದಲಿ ಚತುರಾಸ್ಯವಂದ್ಯನ ವಿಮಲಭಕ್ತಿಯಲಿ ।
ನರ ವೃಕೋದರ ನಕುಲ ಸಹದೇ
ವರು ವಿರಾಟ ದ್ರುಪದ ಮೊದಲಾ
ಗಿರೆ ಸಮಸ್ತ ನೃಪಾಲ ಜನ ವೈಯ್ಯಿಕ್ಕಿತೊಲವಿನಲಿ ॥ ೩೪
ಶಿರವ ನೆಗಹಿ ಯುಧಿಷ್ಠಿರನ ವೈ
ಮುರಿಚಲೀಯದೆ ಕೃಷ್ಣನಪ್ಪಿದ
ನುರುತರ ಪ್ರೇಮದಲಿ ಭೀಮಾರ್ಜುನರ ಯಮಳರನು ।
ಹರುಷದಲಿ ತೆಗೆದಪ್ಪಿ ಭೂಮೀ
ಶ್ವರರ ಮನ್ನಿಸಿದನು ವಿಳಾಸಿನಿ
ಯರ ವಿಡಾಯಿಯೊಳರಸಿ ಬಂದಳು ಕಂಡಳಚ್ಯುತನ ॥ ೩೫

ಕಾಣಿಕೆಯ ಕೈಕೊಂಡು ರಾಯನ
ರಾಣಿಯನು ಮನ್ನಿಸಿದ ತನ್ನಯ
ರಾಣಿವಾಸದ ಹೊರೆಗೆ ನೇಮವನಿತ್ತು ಕಳುಹಿದನು।
ರಾಣಿರುಕುಮಿಣಿಯಾದಿ ಯಾದವ
ಕ್ಷೋಣಿಧರನರಸಿಯರನನಿಬರ
ಕಾಣಿಕೆಯ ಕೊಟ್ಟೆರಗಿ ದ್ರೌಪದಿ ಕಂಡಳೊಲವಿನಲಿ ॥ ೩೬
ದರುಶನವನೊಲಿದಿತ್ತು ವಸುದೇ
ವರನು ದೇವಕಿದೇವಿಯರ ಸಂ
ಕರುಷಣನನು ಮಹೋಗ್ರಸೇನನ ಕಂಡನವನೀಶ ।
ವರಸುಭದ್ರಾದೇವಿ ಭಾವಂ
ದಿರಿಗೆ ವಂದಿಸಿದಳು ಕುಮಾರನು
ಹರುಷದಿಂದಪ್ಪಿದನು ಬಂದಭಿಮನ್ಯು ಪಾಂಡವರ ॥ ೩೭
ಹೊಕ್ಕನಸುರಾರಾತಿ ಪಾಂಡವ
ರಿಕ್ಕಲಿಸಿ ಬರೆ ನಗರಿಯಲಿ ವೈ
ಯಿಕ್ಕಿ ಬೀದಿಯ ಧೂಳಿ ಕವಿದುದು ಮಂದಿ ಸಂದಣಿಸೆ ।
ಹೊಕ್ಕು ಹೊಗಳುವ ಶ್ರುತಿತತಿಯ ಕೈ
ಮಿಕ್ಕು ಕಳೆದನು ಪಾಂಡುಸುತರಿಗೆ
ಸಿಕ್ಕಿದನು ಹರಿಯೆನುತಲಿದ್ದುದು ಸೂರಿಸಂದೋಹ ॥ ೩೮
ಮೇಲೆ ಬೀಳುವ ಮಂದಿಯನು ಕೈ
ಗೋಲಿನವರಪ್ಪಳಿಸೆ ಲಕ್ಷ್ಮೀ
ಲೋಲನವದಿರ ಜಜಿದು ಕಾಣಿಕೆಕೊಳುತ ಪುರಜನರ ।
ಮೇಲೆನೆಲೆಯುಪ್ಪರಿಗೆಗಳ ವರ
ಬಾಲೆಯರ ಕಡೆಗಣ್ಣ ಧಾಳಿ
ವಾಳಿಗಳ ಕೈಕೊಳುತ ಹೊಕ್ಕನು ರಾಜಮಂದಿರವ ॥ ೩೯

ಹಿಡಿದರಾರತಿಗಳನು ಬಣ್ಣದ
ಸೊಡರು ತಳಿತವು ಮುಂದೆ ನೆಲನು
ಘೋಡಿಪ ಭೀಮಾರ್ಜುನರು ಕೈಗೊಡೆ ಧರ್ಮನಂದನನು ।
ಹಿಡಿದ ಕೈದೀವಿಗೆಗಳನು ಕೈ
ದುಡುಕಿ ತಿವಿಪಾಡುವ ಸುಕಾಂತಿಯು
ಕಡಲ ಮಣಿಮಯ ಪೀಠದಲಿ ಕುಳ್ಳಿರ್ದನಸುರಾರಿ ॥ ೪೦
ಬೀಳುಕೊಟ್ಟನು ಜೀಹ ಭೂಮಿಾ
ಪಾಲರನು ಕುಂತೀಕುಮಾರರ
ಮೇಳದಲಿ ಪರಿಮಿತದೊಳಸುರಾರಾತಿ ನಸುನಗುತ ।
ಸೋಲದಲಿ ವೈದಣಿದು ಕುರುಭೂ
ಪಾಲನುಚಿತವ ಮಾಡೆ ರಾಜ್ಯವ
ನಾಳಿಸುವ ಹದನುಂಟೆ ನಿಮ್ಮಾಳಾಪವೇನೆಂದ ॥ ೪೧
ಮರಳಿದವು ತುಜುವಿತ್ತಲಹಿತರು
ಸರಿದರತ್ತಲು ಮತ್ಸ್ಯನೆಮ್ಮೃ
ವರನು ನಾವೆಂದಜಿದು ಕೊಂಡಾಡಿದನು ವಿನಯದಲಿ ।
ವರಸುಭದ್ರಾನಂದನಂಗು
ತ್ತರೆಯನೀವರ್ಥಿಯಲಿ ನಿಮ್ಮನು
ಕರೆಯಲಟ್ಟಿದೆವೆಂದು ಬಿನ್ನಹಮಾಡಿದನು ನೃಪತಿ ॥ ೪೨
ಕೊಳುಕೊಡೆಗೆ ತಪ್ಪೇನು ವಸುಕುಲ
ದೊಳು ವಿರಾಟನು ಚಂದ್ರವಂಶಾ
ವಳಿಯೊಳಧಿಕರು ನೀವು(ಕುಲದೊಳಗಿಲ್ಲ ಹಳಿವುಗಳು)
ಒಳುನುಡಿಗಳಲಿ ದೈವಶಕುನಾ
ವಳಿಗಳಾದಡೆ ಹರುಷದಲಿ ಮಂ
ಗಳಮುಹೂರ್ತವ ಮಾಡಿಯೆಂದನು ಕೃಷ್ಣ ನಸುನಗುತ ॥ ೪೩

ಒಸಗೆಯಲಿ ನಿಸ್ಸಾಳತತಿ ಗ
ರ್ಜಿಸಿದುದಖಿಳನರೌಘ ಉತ್ಸಾ
ಹಿಸಲು ಕನ್ಯಾವರಣವಾಗಲು ವೈದಿಕೋಕ್ತಿಯಲಿ ।
ಹಸೆಯಲಭಿಮನ್ಯುವನು ಸಿಂಗಾ
ರಿಸಿತು ಯದುಪಾಂಚಾಲರಾಜ
ಪ್ರಸರ ಮಿಗೆ ಮುಟ್ಟಕ್ಕಿ ಜೀರಿಗೆ ಬೆಲ್ಲವನುವಾಯ್ತು ॥ ೪೪

ವರಮುಹೂರ್ತದ ಗಳಿಗೆವಟ್ಟಲ
ಚರಿತದೊಳು ಪುಣ್ಯಾಹವನು ವಿ
ಸ್ತರಿಸಿದಕ್ಷತೆ ತುಂಬಿ ತಂದರು ವಿಮಳಮಂಟಪಕೆ ।
ಪರಮ ಋಷಿಗಳು ಹೋಮದಲಿ ಶಿಖಿ
ವರನ ಬಲಗೊಳಿಸುತ ಕುಮಾರಿಯು
ಬರಿಸೆ ಸಪ್ತಪದಿಯಲಿ ಬಂದಳು ವರನ ವಾಮದಲಿ ॥ ೪೫

ವಿಭವದಲಿ ಗುರುದೈವ ಸದ್ವಿಜ
ಸಭೆಯನಾರಾಧಿಸಿದರವನೀ
ವಿಭುಗಳಿತ್ತರು ವಸ್ತುವಡುಗೊರೆ ರತ್ನ ಭೂಷಣವ ।
ಅಭವಸನ್ನಿಭ ವೀರನಾಗೆಂ
ದಿಭಗಮನೆಯರು ಕೃಷ್ಣನರಸಿಯ
ರಭಿಜನಾಮಲತಿಲಕನನು ಹರಸಿದರು ಹರುಷದಲಿ ॥ ೪೬

ಇದು ಸುಭೋಗದ ಗರುಡಿ ಬಹು ಸಂ
ಪದದ ನೆಲೆವನೆ ಸೊಂಪಿನಾಗರ
ವಿದು ಪರಾನಂದಪ್ರವಾಹದ ಜನ್ಮಭೂಮಿಯಿದು ।
ಮುದದ ಕೇಳೀಸ್ಥಾನ ವಿಮಲಾ
ಭ್ಯುದಯದೋಲಗಶಾಲೆ ಲಕ್ಷ್ಮೀ
ಸದನವೆನೆ ರಂಜಿಸಿದುದಭಿಮನ್ಯುವಿನ ವೈವಾಹ ॥ ೪೭

ವರಚತುರ್ಥಿಯೊಳಿರುಳು ಮೆಱೆದರು
ಪುರದೊಳುತ್ಸಾಹದಲಿ ದಂಪತಿ
ವರರು ಭೂಪಕದಂಬದದ್ಭುತ ಚಾತುರಂಗದಲಿ ।
ಮಱುದಿವಸವವಭೃತವನತಿವಿ
ಸ್ತರಿಸಿದರು ಪನ್ನೀರ ಹೊಂಗೊ
ಪ್ಪರಿಗೆಗಳ ಕುಂಕುಮದ ನವಪರಿಮಳದ ರಚನೆಯಲಿ ॥ ೪೮

ಬಳುವಳಿಯನಖಿಳಾವನೀಮಂ
ಡಲವನನುಪಮಕೋಶವನು ವರ
ಲಲನೆಯರ ಗಜವಾಜಿರಥವ ಪದಾತಿಗೋವ್ರಜವ ।
ಅಳಿಯಗಿತ್ತು ವಿರಾಟನೃಪ ಯದು
ಕುಲವ ಪಾಂಚಾಲಕರ ಚೈದ್ಯಾ
ವಳಿಯನುತ್ತಮವಸ್ತುವಾಹನದಿಂದ ಮನ್ನಿಸಿದ ॥ ೪೯

ಆದುದಭಿಮನ್ಯುವಿನ ಮದುವೆ ಮ
ಹಾದಯಾಂಬುಧಿ ಕೃಷ್ಣರಾಯನ
ಪಾದದರುಶನವಾಗಲಿವ್ಮಡಿಸಿತ್ತು ಇವರುದಯ ।
ಮೇದಿನಿಯ ನಾವೊತ್ತೆಯಿಟ್ಟೆವು
ಕಾದುಕೊಂಡೆವು ಸತ್ಯವನು ಮೇ
ಲಾದ ಹದನನು ಕರುಣಿಸೆಂದನು ಭೂಪ ನರಯಣಗೆ ॥ ೫೦

ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟವಚಷ್ಪಟ್ಪದೀನಿಕಾಯು
ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ
ಕರ್ಣಾಟಕ ಭಾರತ ಕಥಾಮಂಜರಿಯೊಳ್
ವಿರಾಟಪರ್ವ ಸಂಗ್ರಹಂ ಸಮಾಪ್ತಂ.

# ಶಬ್ದಕೋಶ

[**ಸೂಚನೆ** – ಮೊದಲನೆಯ ಸಂಖ್ಯೆ ಸಂಧಿಯನ್ನೂ, ಎರಡನೆಯದು ಪದ್ಯವನ್ನೂ ಸೂಚಿಸುತ್ತವೆ. **ಸಂ.** ಎಂದರೆ ಸಂಸ್ಕೃತವೆಂದರ್ಥ ]

## ಅ

| | | | |
|---|---|---|---|
| ಅಕ್ಕಾಡು | ೨ | ೨೦ | ಕ್ಷಯಿಸು |
| ಅಗಿ | ೬ | ೧೯ | ಹೆದರು |
| ಅಗ್ಗಳಿಕೆ | ೧ | ೪ | ಅತಿಶಯ |
| ಅಗ್ರಿ | ೪ | ೩೮ | ಮುಖ್ಯ |
| ಅದಟು | ೫ | ೬೬ | ಪರಾಕ್ರಮ |
| ಅನ್ವಯ | ೨ | ೧೫ | ವಂಶ |
| ಅನಿಮಿಷ | ೬ | ೩೫ | ದೇವತೆ |
| ಅನಿಲ | ೪ | ೭ | ವಾಯು |
| ಅಪದೆಸೆ | ೨ | ೫ | ಕೀಳಾದ ಸ್ಥಿತಿ |
| ಅಪರಭಾಗ | ೩ | ೮೯ | ಹಿಂಭಾಗ |
| ಅಪಸದ | ೩ | ೮೯ | ಕೀಳು ಮನುಷ್ಯ |
| ಅಬುದ | ೨ | ೨ | ಅಬ್ದ (ಸಂ) ವರ್ಷ |
| ಅಭವ | ೮ | ೪೬ | ಈಶ್ವರ |
| ಅಭಿಧಾನ | ೨ | ೬ | ಹೆಸರು |
| ಅಭಿರಾಮ | ೮ | ೧೨ | ಮನೋಹರ |
| ಅಮ್ಮು | ೩ | ೩ | ಸಮರ್ಥಳಾಗು |
| ಅರವಿಂದ | ೩ | ೧ | ಕಮಲ |
| ಅರಿದು | ೩ | ೪ | ಅಸಾಧ್ಯ |
| ಅಱ್ಱಿತಿಯಟ್ಟು | ೩ | ೫೭ | ಹಿಂಬಾಲಿಸು, ಅಟ್ಟಿಕೊಂಡು ಹೋಗು |
| ಅಲಗು | ೩ | ೫ | ಕತ್ತಿ |

| | | | |
|---|---|---|---|
| ಅವಗಡಿಸು | ೩ | ೪೧ | ಕೈಮಾಡು |
| ಅವನೀಸುರ | ೮ | ೪ | ಬ್ರಾಹ್ಮಣ |
| ಅವಭೃತ | ೨ | ೬ | ಯಾಗದ ಕೊನೆಯಲ್ಲಿ ಮಾಡುವ ಮಂಗಳಸ್ನಾನ |
| ಅವಸರ | ೩ | ೪೫ | ಸಮಯ |
| ಅಸಿತಪಕ್ಷ | ೪ | ೧೭ | ಕೃಷ್ಣಪಕ್ಷ |
| ಅಳವಡಿಸು | ೭ | ೧ | ಕೈಕೊಳ್ಳು; ಹೊಂದಿಸಿಕೊಳ್ಳು |
| ಅಳವು | ೪ | ೨೩ | ಸಾಮರ್ಥ್ಯ |
| ಅಳಲು | ೩ | ೧೦ | ದುಃಖ |
| ಅಳುಪು | ೩ | ೪೯ | ಆಸೆಪಡು |
| ಅಳ್ಳೆ | ೫ | ೩ | ಪಕ್ಕೆ |
| ಅಂಕ | ೮ | ೧೧ | ಹೆಸರು |
| ಅಂಗವಟ್ಟ | ೩ | ೪ | ದೇಹ ಸೌಂದರ್ಯ |
| ಅಂಗೈಸು | ೩ | ೫೨ | ಒಟ್ಟಾಗಿಸು |
| ಅಂಡಲೆ | ೩ | ೬೨ | ಪೀಡಿಸು |
| ಅಂತಕ | ೮ | ೧೧ | ಯಮ |
| ಅಂತರ | ೩ | ೧೮ | ಭೇದ |
| ಅಂತರಿಸು | ೨ | ೧೪ | ಚೆದುರು |
| ಅಂದಣ | ೮ | ೩೨ | ಪಲ್ಲಕ್ಕಿ |
| ಅಂಧತೆ | ೩ | ೩೦ | ಕತ್ತಲೆ |
| ಅಂಬರ | ೪ | ೧೫ | ಆಕಾಶ |
| ಅಂಬು | ೩ | ೧೫ | ಬಾಣ |

## ಆ

| | | | |
|---|---|---|---|
| ಆಕೆವಾಳ | ೬ | ೬ | ಶೂರ |
| ಆಖ್ಯ | ೮ | ೩೦ | ಹೆಸರಿನ |

| | | | |
|---|---|---|---|
| ಆಟವಿಕ | ೬ | ೩೨ | ಸಾಮಾನ್ಯ |
| ಆನ್ | ೪ | ೩೫ | ಆತುಕೊ, ಸಹಾಯಕನಾಗು |
| ಆನತ | ೧ | ೧ | ನಮಸ್ಕರಿಸಿದ |
| ಆಪು | ೩ | ೧೪ | ಶಕ್ತಿ |
| ಆಯತ | ೩ | ೧೮ | ವಿಸ್ತಾರವಾದ |
| ಆಲಿ | ೩ | | ಕಣ್ಣು |
| ಆಹವ | ೪ | ೨೬ | ಯುದ್ಧ |

## ಇ

| | | | |
|---|---|---|---|
| ಇಕ್ಕೆಲ | ೩ | ೧ | ಎರಡು+ಕೆಲ; ಎರಡು ಪಾರ್ಶ್ವ |
| ಇಟ್ಟಣಿಸು | ೫ | ೪ | ದಟ್ಟವಾಗು |
| ಇರುಳು | ೩೭ | ೬ | ರಾತ್ರಿ |
| ಇಂದು | ೩ | ೩೭ | ಚಂದ್ರ |
| ಇಂದುಧರ | ೭ | ೫ | ಈಶ್ವರ |

## ಈ

| | | | |
|---|---|---|---|
| ಈಡಾಡು | ೨ | ೯ | ಎರಚಾಡು |

## ಉ

| | | | |
|---|---|---|---|
| ಉಗ್ಘಡಿಸು | ೫ | ೫೦ | ಘೋಷಿಸು |
| ಉತ್ತರಾಯಿ | ೪ | ೧೨ | ಅಧಿಕಾರಿ |
| ಉತ್ಪಾತ | ೬ | ೧ | ಅಪಶಕುನ |
| ಉದಧಿ | ೨ | ೨೦ | ಸಮುದ್ರ |
| ಉಪಕಂಠ | ೨ | ೯ | ಸಮೀಪ |

| | | | |
|---|---|---|---|
| ಉಪ್ಪವಡಿಸು | ೮ | | ಏಳು |
| ಉಬ್ಬೆಗ | ೩ | ೯೫ | ಉದ್ವೇಗ(ಸಂ) |
| ಉರಗ | ೬ | ೪ | ಹಾವು |
| ಉರವಣಿಸು | ೪ | ೩ | ಉತ್ಸಾಹಿಸು |
| ಉರುತರ | ೨ | ೧೨ | ಶ್ರೇಷ್ಠವಾದ |
| ಉಱ್ಱುವ | ೩ | ೮೪ | ಸಮೀಪಿಸಿದ |

## ಊ

| | | | |
|---|---|---|---|
| ಊಳಿಗ | ೩ | ೧೨ | ಕೆಲಸ |

## ಎ

| | | | |
|---|---|---|---|
| ಎಕ್ಕಟಿ | ೫ | ೧೭ | ಏಕಾಂತ |
| ಎಡರು | ೩ | ೩೭ | ತೊಂದರೆ, ಕಷ್ಟ |
| ಎಱಗು | ೨ | ೧೦ | ನಮಸ್ಕರಿಸು |

## ಏ

| | | | |
|---|---|---|---|
| ಏಱು | ೬ | ೨೪ | ಗಾಯ |

## ಒ

| | | | |
|---|---|---|---|
| ಒಗ್ಗು | ೪ | ೧೩ | ಸಮೂಹ |
| ಒಡ್ಡಣ | ೩ | ೨೮ | ರಾಶಿ |
| ಒಡ್ಡವ | ೧ | ೪ | ರೀತಿ |
| ಒಡ್ಡು | ೫ | ೪೮ | ಸಮೂಹ |
| ಒಬ್ಬುಳಿ | ೬ | ೧೪ | ಸಮೂಹ |

## ಓ

| | | | |
|---|---|---|---|
| ಓಪಳು | ೩ | ೧೪ | ಪ್ರಿಯಳು |
| ಓಳಿ | ೪ | ೨೨ | ಸಾಲು |

## ಕ

| | | | |
|---|---|---|---|
| ಕಕ್ಕುಲಿತೆ | ೫ | ೫೩ | ಆಸೆ, ಪ್ರೇಮ |
| ಕಟಕ | ೪ | ೧೨ | ರಾಜಧಾನಿ |
| ಕಟ್ಟಾಳು | ೪ | ೪ | ಶೂರ |
| ಕಡಲು | ೪ | ೩೦ | ಸಮುದ್ರ |
| ಕಡುಗು | ೫ | ೧೧ | ಉತ್ಸಾಹಗೊಳ್ಳು |
| ಕಡುಹು | ೬ | ೫೮ | ಗರ್ವ |
| ಕಣ | ೬ | ೧೩ | ಯುದ್ಧರಂಗ |
| ಕಣ್ಣೆ | ೩ | ೬೧ | ಹಗ್ಗ |
| ಕತ | ೩ | ೧೦೩ | ಕಾರಣ |
| ಕದಂಬ | ೮ | ೪೮ | ಸಮೂಹ |
| ಕನಕ | ೭ | ೧೫ | ಚಿನ್ನ |
| ಕನಲು | ೩ | ೭೩ | ಕೋಪಗೊಳ್ಳು |
| ಕಬರಿ | ೩ | ೮೩ | ಮುಡಿ |
| ಕವಡಿಕೆ | ೪ | ೪೦ | ಕಪರ್ದಿಕ (ಸಂ) ಕವಡೆ |
| ಕಕ್ಷ | ೨ | ೧೩ | ಕಂಕಳು |
| ಕ್ರತು | ೮ | ೬ | ಯಾಗ |
| ಕಾಕನಾಡು | ೩ | ೭ | ಹೀನವಾಗಿ ನುಡಿ |
| ಕಾಯ | ೩ | ೬೧ | ದೇಹ |
| ಕಾಲ | ೩ | ೨೬ | ಯಮ |

| | | | |
|---|---|---|---|
| ಕೀಸು | ೮ | ೮ | ಸಣ್ಣಗೆ ಹೆರೆ |
| ಕುಜನ | ೩ | ೧೬ | ಕೆಟ್ಟವರು; ಅಲ್ಪರು |
| ಕುರುಳು | ೩ | ೭೧ | ಕೂದಲು |
| ಕುಲಿಶ | ೬ | ೨೨ | ವಜ್ರಾಯುಧ |
| ಕುವರ | ೧ | ೨ | ಕುಮಾರ(ಸಂ)ಮಗ |
| ಕುಸುಮಶರ | ೩ | ೭೮ | ಮನ್ಮಥ |
| ಕುಸುರಿದಱಿ | ೩ | ೭೨ | ಕೊಚ್ಚು |
| ಕುಹಕಿ | ೪ | ೫ | ಮೋಸಗಾರ |
| ಕೂರಲಗು | ೭ | ೫ | ಹರಿತವಾದ ಕತ್ತಿ |
| ಕೂರುಗಣೆ | ೩ | ೮ | ಹರಿತವಾದ ಬಾಣ |
| ಕೃಚ್ಛ್ರ | ೧ | ೬ | ಒಂದು ರೀತಿಯ ತಪಸ್ಸು |
| ಕೃತಾಂತ | ೩ | ೮೫ | ಯಮ |
| ಕೃಪಾಣ | ೩ | ೧೯ | ಕತ್ತಿ |
| ಕೇಣ | ೪ | ೩೦ | ಮತ್ಸರ |
| ಕೈದು | ೨ | ೯ | ಆಯುಧ |
| ಕೈವಾರಿ | ೮ | ೬ | ಹೊಗಳುಭಟ್ಟ |
| ಕೊನರು | ೩ | ೬೨ | ಚಿಗುರು |
| ಕೊಳುಗುಳ | ೫ | ೩೫ | ಯುದ್ಧರಂಗ |
| ಕೋಲು | ೫ | ೧ | ಬಾಣ |
| ಕೋವಿದ | ೭ | ೨೦ | ಬಲ್ಲವನು; ವಿದ್ವಾಂಸ |
| ಕೋಳುವಿಡಿ | ೪ | ೧೪ | ಸೆರೆಹಿಡಿ |
| ಕ್ಷೋಣಿ | ೪ | ೪೩ | ಭೂಮಿ, ಕ್ಷೇತ್ರ |
| ಕಂದರ್ಪ | ೩ | ೩೪ | ಮನ್ಮಥ |
| ಕಿಂಕರ | ೧ | ೪ | ಸೇವಕ |
| ಕೊಂಡೆಯ | ೨ | ೭ | ಚಾಡಿ |

## ಖ

| | | | |
|---|---|---|---|
| ಖತಿ | ೨ | ೨೩ | ಕೋಪ |
| ಖುರಪುಟ | ೮ | ೨ | ಕುದುರೆಯು ಕಾಲಿನ ಗೊರಸು |
| ಖುಲ್ಲ | ೩ | ೭೬ | ದುಷ್ಟ, ನೀಚ |
| ಖಂಡೆಯ | ೫ | | ಗಳಕತ್ತಿ |

## ಗ

| | | | |
|---|---|---|---|
| ಗಸಣಿ | ೩ | ೫೮ | ಯೋಚನೆ, ತೊಂದರೆ |
| ಗಳಹು | ೫ | ೫೫ | ಹರಟು |
| ಗಾವಳಿ | ೩ | ೯ | ಅಬ್ಬರ, ಅತಿಶಯ |
| ಗೀರ್ವಾಣ | ೩ | ೬೫ | ದೇವತೆ |
| ಗೊಳೆಯ | ೫ | ೪ | ಗುಂಪು |

## ಚ

| | | | |
|---|---|---|---|
| ಚತುರಾಸ್ಯ | ೮ | ೩೪ | ಬ್ರಹ್ಮ |
| ಚರ | ೪ | ೭ | ಸೇವಕ |
| ಚಾರು | ೧ | ೨ | ರಮ್ಯ, ಮನೋಹರ |
| ಚಿತ್ತ | ೩ | ೨೧ | ಮನಸ್ಸು |
| ಚುಕ್ಕಿ | ೪ | ೨೮ | ಹಿಂಬಾಲಕರು, ಅಲ್ಪರು |
| ಚೂಣಿ | ೪ | ೩೦ | ಸೈನ್ಯದ ಮುಂಭಾಗ |

## ಜ

| | | | |
|---|---|---|---|
| ಜಕ್ಕವಕ್ಕಿ | ೮ | ೫ | ಚಕ್ರವಾಕಪಕ್ಷಿ |
| ಜಠರ | ೨ | ೧೫ | ಹೊಟ್ಟೆ |
| ಜಲಧಿ | ೩ | ೨೧ | ಸಮುದ್ರ |

| | | | |
|---|---|---|---|
| ಜವ | ೫ | ೧೨ | ಯಮ |
| ಜಾಹ್ನವಿ | ೩ | ೩ | ಗಂಗೆ |
| ಜ್ಯೋತಿಷ್ಟೋಮ | ೧ | ೬ | ಒಂದುಯಾಗ |
| ಜಂಗಮ | ೧ | ೨ | ಚಲಿಸುವ |

## ಝ

| | | | |
|---|---|---|---|
| ಝಡತೆ | ೩ | ೩೧ | ಜಾಗ್ರತೆ |

## ಟ

| | | | |
|---|---|---|---|
| ಟೆಕ್ಕೆಯ | ೫ | ೩೭ | ಧ್ವಜ, ಬಾವುಟ |

## ಡ

| | | | |
|---|---|---|---|
| ಡಾವರ | ೩ | ೧೫ | ಕಾಟ, ತೊಂದರೆ |
| ಡಿಂಬ | ೩ | ೨೪ | ದೇಹ |

## ತ

| | | | |
|---|---|---|---|
| ತ್ರತ್ತ್ರವಣೆ | ೬ | ೧೦ | ಏರ್ಪಾಟು |
| ತಳೋದರಿ | ೮ | ೧೦ | ಹೆಂಗಸು |
| ತಿಗುರು | ೩ | ೬೫ | ಲೇಪಸು |
| ತಿಬ್ಬ | ೪ | ೧೭ | ಬಿಲ್ಲಿನ ಹಗ್ಗ |
| ತಿಮಿರ | ೩ | ೧೮ | ಕತ್ತಲೆ |
| ತಿಂಥಿಣಿ | ೧ | ೩ | ಸಮೂಹ |
| ತುರುಗಾಹಿ | ೨ | ೧೦ | ಹಸು ಕಾಯುವವನು |
| ತೆತ್ತಿಗ | ೮ | ೧೭ | ಸೇವಕ |
| ತೇಜಿ | ೪ | ೨೨ | ಕುದುರೆ |

| | | | |
|---|---|---|---|
| ತೋಟಿ | ೪ | ೪ | ಹೋರಾಟ, ಕಾಳಗ |

## ಥ

| | | | |
|---|---|---|---|
| ಥಟ್ಟು | ೫ | ೨ | ಸೈನ್ಯ, ಸಮೂಹ |

## ದ

| | | | |
|---|---|---|---|
| ದಡ್ಡಿ | ೫ | ೩೭ | ಜವನಿಕೆ, ಪರದೆ |
| ದಂಡಿ | ೩ | ೬೨ | ರೀತಿ, ಕ್ರಮ |
| ದಾಡೆ | ೫ | ೧೨ | ದಂಷ್ಟ್ರಾ (ಸಂ) |
| ದಾತಾರ | ೧ | ೧ | ದಾನಿ |
| ದ್ವಿಜ | ೧ | ೫ | ಬ್ರಾಹ್ಮಣ |
| ದಿವಿಜ | ೨ | ೧೨ | ದೇವತೆ |
| ದಿಂಡುದಱಿ | ೬ | ೨೩ | ಕೊಬ್ಬು |
| ದುರ್ಗ | ೫ | ೭ | ಕೋಟೆ |
| ದುವ್ವಾಳಿಸು | ೬ | ೪೯ | ಹರಿಸು, ತಿರುಗಿಸು |

## ಧ

| | | | |
|---|---|---|---|
| ಧುರ | ೫ | ೨೫ | ಯುದ್ಧ |

## ನ

| | | | |
|---|---|---|---|
| ನಟುವಿಗ | ೨ | ೭ | ನರ್ತಕ |
| ನಾಕದವರು | ೫ | ೯ | ದೇವತೆಗಳು |
| ನಿಕರ | ೧ | ೧ | ಸಮೂಹ |
| ನಿದಾಘ | ೬ | ೨ | ಬೇಸಿಗೆ |

| | | | |
|---|---|---|---|
| ನಿನದ | ೨ | ೧ | ಧ್ವನಿ |
| ನಿವಹ | ೩ | ೩ | ಸಮೂಹ |
| ನಿವಾಳಿ | ೮ | ೩೯ | ದೃಷ್ಟಿತೆಗೆ |
| ನಿಸ್ಸಾಳ | ೪ | ೨೭ | ವಾದ್ಯ |
| ನಿಸ್ವನ | ೫ | ೩೬ | ಶಬ್ದ |
| ನಿಳಯ | ೨ | ೭ | ಮನೆ |
| ನೀಱಿ | ೩ | ೩೫ | ಸುಂದರಿ |
| ನೆಗಹು | ೩ | ೩೬ | ಎತ್ತು |
| ನೆಗಳ್ | ೪ | ೧೦ | ಮಾಡು |
| ನೆರವಿ | ೭ | ೯ | ಸಮೂಹ |
| ನೇಮ | ೮ | ೨೦ | ಅಪ್ಪಣೆ |
| ನೇಮಿಸು | ೪ | ೧ | ಅಪ್ಪಣೆಮಾಡು |
| ನೇವರಿಸು | ೩ | ೭೧ | ಸರಿಪಡಿಸು, ತಿದ್ದು |
| ನಂದನ | ೭ | ೨೨ | ಮಗ |

## ಪ

| | | | |
|---|---|---|---|
| ಪಡಿಹಾಱ | ೮ | ೨೫ | ದ್ವಾರಪಾಲಕ |
| ಪಡೆ | ೫ | ೧೬ | ಸೈನ್ಯ |
| ಪಥ | ೬ | ೧೯ | ದಾರಿ |
| ಪಯೋಜ | ೩ | ೩೫ | ಕಮಲ |
| ಪರಿಭವ | ೩ | ೫೭ | ಸೋಲು, ಅವಮಾನ |
| ಪರುಠವಿಸು | ೮ | ೨೧ | ಚೆನ್ನಾಗಿಹೇಳಿಕೊಡು |
| ಪಲ್ಲವ | ೪ | ೯ | ಚಿಗುರು |
| ಪವಡಿಸು | ೩ | ೮೩ | ಮಲಗು |
| ಪ್ರಸರ | ೮ | ೪೪ | ಸಮೂಹ |
| ಪಸಾಯತ | ೭ | ೮ | ಬಹುಮಾನ |

| | | |
|---|---|---|
| ಪಾಣಿ | ೩ ೯ | ಕೈ |
| ಪಾತಕ | ೩ ೫ | ಪಾಪ |
| ಪಾಯುದಳ | ೩ ೬೮ | ಸೈನ್ಯ |
| ಪಾವಕ | ೬ ೨೮ | ಅಗ್ನಿ |
| ಪಾವುಡ | ೩ ೩೦ | ಪ್ರಾಭೃತ (ಸಂ) ಬಟ್ಟೆ |
| ಪಾಶ | ೩ ೮೫ | ಹಗ್ಗ |
| ಪಾಸಟಿ | ೩ ೮೬ | ಸಮಾನ |
| ಪುಳಕ | ೩ ೨ | ರೋಮಾಂಚ |
| ಪೂಸು | ೩ ೮೪ | ಲೇಪಿಸಿಕೊಳ್ಳು |
| ಪೊಡಮಡು | ೭ ೨೬ | ನಮಸ್ಕರಿಸು |
| ಪೈಸರವೋಗು | ೩ ೯೦ | ? |
| ಪೆಂಡೆಯ | ೪ ೧೨ | ಬಿರುದಿನಾಭರಣ |

## ಫ

| | | |
|---|---|---|
| ಫಣಿ | ೩ ೯ | ಸರ್ಪ, ಹಾವು |

## ಬ

| | | |
|---|---|---|
| ಬಟ್ಟೆ | ೩ ೮೩ | ವರ್ತ್ಮ (ಸಂ) ದಾರಿ |
| ಬಣಗು | ೩ | ಸಾಮಾನ್ಯ |
| ಬರಡ | ೫ ೨೮ | ಹೇಡಿ |
| ಬಜ್ರಿಕೈದು | ೩ ೯೮ | ನಾಶಮಾಡಿ |
| ಬಲ್ಲಹ | ೮ ೪ | ವಲ್ಲಭ (ಸಂ) ಸ್ವಾಮಿ |
| ಬಲ್ಲಿದ | ೩ ೭ | ಶೂರ |
| ಬಲ್ಲೆಹ | ೩ ೦ | ಆಯುಧ |
| ಬವರ | ೫ ೧೨ | ಯುದ್ಧ |
| ಬೋಳೆಯ | ೮ ೩೩ | ದೇವತೆ |
| ಬೋಳೈಸು | ೪ ೪೨ | ಸಮಾಧಾನಪಡಿಸು |

## ಭ

| | | |
|---|---|---|
| ಭವನ | ೩ ೬ | ಮನೆ |
| ಭಾಸ್ಕರ | ೩ ೧೮ | ಸೂರ್ಯ |
| ಭುವನ | ೨ ೯ | ಲೋಕ |
| ಭೂಸುರ | ೭ ೬ | ಬ್ರಾಹ್ಮಣ |

## ಮ

| | | |
|---|---|---|
| ಮಕುಟ | ೬ ೫೫ | ಕಿರೀಟ |
| ಮಗುಳ್ | ೪ ೭೪ | ಹಿಂದಿರುಗು |
| ಮಜ್ಜನ | ೮ ೬ | ಸ್ನಾನ |
| ಮತ್ಸರ | ೧ ೩೨ | ಹೊಟ್ಟೆಯುರಿ |
| ಮತ್ತವಾರಣ | ೨ ೭ | ಮದ್ದಾನೆ |
| ಮದನ | ೩ ೧೫ | ಮನ್ಮಥ |
| ಮದ್ದು | ೩ ೩೪ | ಔಷಧ |
| ಮಧು | ೩ ೩೧ | ಜೇನು |
| ಮಧುಕರ | ೩ ೩೨ | ದುಂಬಿ |
| ಮನ್ನಣೆ | ೫ ೪ | ಮಾನ್ಯ (ಸಂ) |
| ಮಯೂಖ | ೭ ೧೬ | ಕಿರಣ |
| ಮಸಕ | ೪ ೪೧ | ಕೋಪ |
| ಮಾತೃಕೆ | ೫ ೩೬ | ಮೂಲ |
| ಮಿತ್ತು | ೫ ೪೬ | ಮೃತ್ಯು (ಸಂ) |
| ಮಿಟು | ೩ ೬ | ಸೌಂದರ್ಯ |
| ಮುಸುಡು | ೩ ೨೨ | ಮುಖ |
| ಮುಂಚು | ೭ ೭೧ | ಬೀರು |
| ಮೂಗುಚ್ಚಿ | ೩ ೬೬ | ಮೂಕ |
| ಮೃಡ | ೫ ೩೮ | ಈಶ್ವರ |

| | | | |
|---|---|---|---|
| ಮೇಲುಂದು | ೫ | ೧೨ | ಸೆರಗು |
| ಮೇಳ | ೨ | ೨ | ಜೊತೆ |
| ಮೇಳೈಸು | ೬ | ೯ | ಜೊತೆಗೂಡಿಸು |
| ಮೈಗಱ್ಱಿ | ೨ | ೨೪ | ಮೈಮರೆಸಿಕೊಳ್ಳು |
| ಮೊನೆ | ೬ | ೧೧ | ಯುದ್ಧ |
| ಮೋಹರ | ೪ | ೧೬ | ಸೈನ್ಯ |
| ಮೌಕ್ತಿಕ | ೨ | ೧೯ | ಮುತ್ತಿನ |
| ಮೌಳಿ | ೨ | ೬ | ತಲೆ |
| ಮೌಳಿಕಾತಿ | ೩ | ೫ | ಶ್ರೇಷ್ಠಳು |

## ರ

| | | | |
|---|---|---|---|
| ರಹ | ೫ | ೪ | ದಾರಿ |
| ರಾಜೀವಪೀಠ | ೧ | ೧ | ಬ್ರಹ್ಮ |
| ರುಧಿರ | ೬ | ೫ | ರಕ್ತ |
| ರೂಹು | ೩ | ೨೫ | ರೂಪು |

## ಲ

| | | | |
|---|---|---|---|
| ಲಲಾಮ | ೬ | ೧ | ಶ್ರೇಷ್ಠ |
| ಲಹರಿ | ೮ | | ಅಲೆ |
| ಲೋಗ | ೫ | ೪೮ | ಸಾಮಾನ್ಯ |

## ವ

| | | | |
|---|---|---|---|
| ವ್ರಜ | ೩ | ೭ | ಸಮೂಹ |
| ವಟಕುಜ | ೨ | ೨ | ಆಲದ ಮರ |
| ವತ್ಸರ | ೬ | ೪ | ವರುಷ |
| ವಧು | ೨ | ೧೪ | ಹೆಂಗಸು |
| ವಲ್ಲಭ | ೩ | ೬ | ಗಂಡ |
| ವಸುಧೆ | ೩ | ೭೯ | ಭೂಮಿ |
| ವಳಿತ | ೨ | ೪ | ಪ್ರದೇಶ |

| | | |
|---|---|---|
| ವಾಘೆ | ೬ ೦ | ಕಡಿವಾಣ |
| ವ್ರಾತ | ೭ ೧೭ | ಸಮೂಹ |
| ವಾರಣ | ೭ ೨೦ | ಆನೆ |
| ವಾರುವ | ೫ ೦ | ಕುದುರೆ |
| ವಾಹಿನಿ | ೫ ೬ | ಸೈನ್ಯ |
| ವಿಗಡ | ೨ ೨೦ | ಶೂರ |
| ವಿಗ್ರಹ | ೪ ೩೮ | ಸೈನ್ಯ |
| ವಿರಹಿ | ೧ ೫ | ಅಗಲಿದವನು |
| ವಿರಿಂಚಿನ | ೬ ೩೭ | ಬ್ರಹ್ಮ |
| ವಿಸರ | ೬ ೪೩ | ಸಮೂಹ |
| ವಿಸ್ಫುಲಿಂಗ | ೬ ೪೮ | ಕಿಡಿ |
| ವೃಕೋದರ | ೩ ೭೮ | ಭೀಮ |
| ವೆಗ್ಗಳಿಸು | ೩ ೯ | ಅತಿಶಯವಾಗು |
| ವೇಗಾಯ್ಲ | ೮ ೨ | ಕಡುವೇಗ |

## ಶ

| | | |
|---|---|---|
| ಶಕ್ರ | ೨ ೧ | ಇಂದ್ರ |
| ಶಮಿ | ೩ ೨೫ | ಬನ್ನಿ [ಮರ] |
| ಶಶಿ | ೩ ೨೫ | ಚಂದ್ರ |
| ಶೂಲಪಾಣಿ | ೭ ೧೧ | ಈಶ್ವರ |
| ಶೋಣಿತ | ೭ ೧೬ | ರಕ್ತ |

## ಸ

| | | |
|---|---|---|
| ಸದನ | ೭ ೩೨ | ಮನೆ |
| ಸನ್ನಿಭ | ೪ ೩೮ | ಸಮಾನ |
| ಸಮೀರ | ೨ ೧೮ | ವಾಯು |

| | | |
|---|---|---|
| ಸರಳು | ೪ ೩೨ | ಬಾಣ |
| ಸಾರಿ | ೨ ೧. | ಪಟಪೆಕಾಯಿ |
| ಸಿತತುರಗ | ೨ ೧೯ | ಅರ್ಜುನ |
| ಸೀಗುರಿ | ೫ ೩೫ | ಚಾಮರ |
| ಸೀವರಿಸು | ೪ ೧೭ | ಅಸಹ್ಯಪಡು |
| ಸುಕೃತ | ೩ ೩೬ | ಪುಣ್ಯ |
| ಸುದತಿ | ೭ ೨೦ | ಹೆಂಗಸು |
| ಸುಧಾ | ೧ ೧ | ಅಮೃತ |
| ಸುಮ್ಮಾನ | ೩ ೮೫ | ಸಂತೋಷ |
| ಸುರಗಿ | ೪ ೩೨ | ಕತ್ತಿ |
| ಸೂಟಿ | ೫ ೧ | ವೇಗ |
| ಸೂನು | ೨ ೧೮ | ಮಗ |
| ಸೂರುಳ್ | ೭ ೨೮ | ಆಣೆ |
| ಸೂವಾರ | ೩ ೫೪ | ಅಡಿಗೆ |
| ಸೆಗಳಿಕೆ | ೩ ೨೫ | ಶಾಖ |
| ಸೆರೆ | ೭ .೫ | ರಕ್ತನಾಳ |
| ಸೇಸೆ | ೭ ೨೦ | ಶೀರ್ಷಾ (ಸಂ) ಅಕ್ಷತೆ |
| ಸೈವೆಱಗಾಗು | ೩ ೫೦ | ಆಶ್ಚರ್ಯಪಡು |
| ಸಂವರಿಸು | ೫ ೪೩ | ಸಿದ್ಧಪಡಿಸು |
| ಸಂಸೃತಿ | ೩ ೩೪ | ಸಂಸಾರ |
| ಸಿಂಘ | ೫ ೩೫ | ಬಾವುಟ |
| ಸುಂಟಿಗೆ | ೬ ೨೭ | ಬೆಂದಮಾಂಸ |

## ಹ

| | | |
|---|---|---|
| ಹಗರು | ೫ ೫೫ | ಅರ್ಧಚಂದ್ರಾಕಾರದ ಬೆರಳವಿನ್ಯಾಸ |
| ಹಣಿದವಾಡು | ೩ ೧೬ | ನಾಶಮಾಡು |
| ಹರಣ | ೩ ೭೫ | ಪ್ರಾಣ [ಸಂ] |

| | | | |
|---|---|---|---|
| ಹರಿಬ | ೩ | ೫೨ | ಕರ್ತವ್ಯ |
| ಹಲ್ಲಣಿಸು | ೪ | ೨೨ | ಜೀನುಹಾಕು |
| ಹಳವಿಗೆ | ೮ | ೩೨ | ಬಾವುಟ |
| ಹಳಿವು | ೩ | ೧೧ | ನಿಂದೆ |
| ಹಿಣಿಲು | ೭ | ೮೩ | ಜಡೆ |
| ಹಿಳುಕು | ೩ | ೨೧ | ಬಾಣದ ಗತಿ |
| ಹೀಹಾಳಿ | ೩ | ೫೨ | ಮಮತೆ |
| ಹುತವಹ | ೨ | ೧ | ಅಗ್ನಿ |
| ಹುಯ್ಯಲು | ೪ | ೨೫ | ಬೊಬ್ಬೆ, ಕಿರಿಚಾಟ |
| ಹೊಲ್ಲೆಹ | ೩ | ೫೮ | ಕೆಟ್ಟ |
| ಹೊಳಲು | ೨ | ೧೮ | ಪಟ್ಟಣ |
| ಹೊಂಗು | ೨ | ೨೧ | ಹಿಗ್ಗು |
| ಹೊಂಪುಳಿ | ೮ | ೨೬ | ರೋಮಾಂಚ |

———

# ನಮ್ಮ ಪ್ರಕಟನೆಗಳು.

---

**೧ ಚಂದ್ರಗುಪ್ತ ವಿಜಯ** (ಮೂರನೆಯ ಮುದ್ರಣ)
ಲೇಖಕರು; ಎಚ್.ಎಂ. ಶಂಕರನಾರಾಯಣ ರಾವ್, ಎಂ.ಎ.
ಪುಟಗಳು viii+೧೫೪. ಬೆಲೆ. ೧ ೮ ೦

ನಂದನರನ್ನು ಕೊಂದು ಚಂದ್ರಗುಪ್ತಮೌರ್ಯನನ್ನು ಪಾಟಲೀಪುರದ ಸಿಂಹಾಸನದ ಮೇಲೆ ಸ್ಥಿರವಾಗಿ ಕುಳ್ಳಿರಿಸಲು ಚಾಣಕ್ಯನೆಂಬ ಬ್ರಾಹ್ಮಣನು ಕೈಕೊಂಡ ರಾಜತಂತ್ರಗಳನ್ನು ವಿವರಿಸುವ ಪುರಾತನವೂ ಪ್ರಸಿದ್ಧವೂ ಆದ ಐತಿಹಾಸಿಕ ಕಥೆ.

It is an old story but it is retold here in current kannada, and in a manner which makes its many intricacies quite plain. The style is simple and straight forward: the dialogues are lively and the descriptions, where they occur, show a clear touch of imagination.

— *Prof. M Hiriyanna.*

**೨ ಕಥಾವಲ್ಲರಿ:** ತ.ಸು. ಶಾಮರಾಯ, ಎಂ.ಎ. (ಪ್ರತಿಗಳು ಮುಗಿದಿವೆ) ಕೆಲವು ಜೈನ ಮಹಾಕಾವ್ಯಗಳ ಕಥಾಸಂಗ್ರಹ.

**೩ ರೋಮಿಯೋ ಮತ್ತು ಜೂಲಿಯೆಟ್:** ಎಚ್. ಎಂ. ಶಂಕರನಾರಾಯಣ ರಾವ್, ಎಂ. ಎ., ಷೇಕ್ಸ್‌ಪಿಯರ್ ಮಹಾಕವಿಯ ನಾಟಕದ ಕನ್ನಡ ಗದ್ಯಸಂಗ್ರಹ. ಬೆಲೆ ೦ ೧೨ ೦

೪ **ಮೈಥಿಲಿ:** ಎಸ್. ಅನಂತನಾರಾಯಣ.
(ಸಣ್ಣ ಕಥೆಗಳ ಸಂಗ್ರಹ) ಬೆಲೆ ೧ ೮ ೦

೫ **ಎರಡನೆಯ ಕಾಣಿಕೆ:** ಅಶ್ವತ್ಥ (ಅಚ್ಚಿನಲ್ಲಿ)

೬ **ನನ್ನ ದಿನಚರಿಯ ಪುಟಗಳಿಂದ:** ಸಣ್ಣ ಕಥೆಗಳ ಸಂಗ್ರಹ ಎಚ್. ಕೆ. ರಾಜಾರಾವ್, ಎಂ.ಎ. (ಅಚ್ಚಿನಲ್ಲಿ)

೭ **ಪ್ರಸಾರ ನಾಟಕಗಳು:** ಎಚ್. ಕೆ. ರಂಗನಾಥ್, ಎಂ.ಎ.
ಬೆಲೆ ೧ ೮ ೦

೮ **ಕಾಶೀಯಾತ್ರೆ:** ಕ್ಷೀರಸಾಗರ (ಪ್ರತಿಗಳು ಮುಗಿದಿವೆ)
ಬೆಲೆ ೦ ೧೨ ೦

೯ **ಲಕೀ ಲಕ್ಷ್ಮಣ್:** ಕ್ಷೀರಸಾಗರ ಬೆಲೆ ೦ ೧೦ ೦

೧೦ **ರುಪಾಯಿ ಗಿಡ:** ಕ್ಷೀರಸಾಗರ (ಅಚ್ಚಿನಲ್ಲಿ)

೧೧ **ಕ್ಯಾನ್‌ಡೈಡ್ (ಕಥೆ)** ಟಿ. ಎಸ್. ರಾಮಸ್ವಾಮಯ್ಯ
(ಅಚ್ಚಿನಲ್ಲಿ)

೧೨ **ಸೆರೆಯಾಳು** (ಸಣ್ಣ ಕತೆಗಳು) ಎಚ್. ಎಂ. ಶಂಕರ ನಾರಾಯಣರಾವ್, ಎಂ.ಎ. (ಅಚ್ಚಿನಲ್ಲಿ)

೧೩ **ಉಂಗುರ** (ಕವಿತೆಗಳು) ಕೆ. ಎಸ್. ನರಸಿಂಹಸ್ವಾಮಿ
೧ ೮೦

೧೪ **ಕರ್ಣ** (ಕವಿತೆ) ಎಮ್. ಎಸ್. ಅನಂತಪದ್ಮನಾಭರಾವ್
' ೦ ೦

೧೫ **ಸಾಮಗಾನ** (ಕವಿತೆ) ಜಿ.ಎಸ್. ಶಿವರುದ್ರಪ್ಪ ೧ ೦ ೦

೧೬ **ಯಶೋಧರ ಚರಿತ್ರೆಯ ಸಂಗ್ರಹಗ ವಿವರಣೆ**
೧ ೦ ೦

೧೭ **ಹರಿಶ್ಚಂದ್ರಕಾವ್ಯ ಸಂಗ್ರಹದ ಕೈಕನ್ನಡಿ**
೨ ೦ ೦

೧೮ **ಕನ್ನಡ ಧ್ವನ್ಯಾಲೋಕ** ಡಾ|| ಕೆ ಕೃಷ್ಣಮೂರ್ತಿ
ಎಂ.ಎ.ಬಿ.ಟಿ. ಪಿ ಎಚ್.ಡಿ. (ಅಚ್ಚಿನಲ್ಲಿ)

೧೯ **ರೋಮನ್ ಚಕ್ರಾಧಿಪತ್ಯದ ಚರಿತ್ರೆ**
ಡಾ|| ಎಸ್ ಶ್ರೀಕಂಠಶಾಸ್ತ್ರಿ, ಎಂ.ಎ. ಡಿ. ಲಿಟ್. ೧ ೮ ೦

೨೦ **ವರ್ಧಾಶಿಕ್ಷಣ** ತ.ಸು. ಶಾಮರಾಯ, ಎಂ.ಎ,.
ರಾಮಚಂದ್ರರಾವ್, ಬಿ.ಎ.ಬಿ.ಟಿ ೨ ೮ ೦

೨೧ **ರತ್ನಾಕರವರ್ಣಿ :** ಲೇಖಕರು. ತ.ಸು. ಶಾಮರಾಯ
ಎಂ. ಎ ಪುಟಗಳು ೭೨. ಬೆಲೆ: ಸಾಧಾರಣ ಪ್ರತಿ ೦ ೮ ೦
ಉತ್ತಮ ಪ್ರತಿ ೧ ೦ ೦

ಕನ್ನಡ ಸಾಂಗತ್ಯಲೇಖಕರಲ್ಲಿ ಅಗ್ರಗಣ್ಯನಾದ ರತ್ನಾಕರ ವರ್ಣಿಯ 'ಭರತೇಶವೈಭವ' ದ ಪರಿಚಯವನ್ನು ಸಂಗ್ರಹವಾಗಿಯೂ ಸಾರವತ್ತಾಗಿಯೂ ಮಾಡಿಕೊಡುತ್ತದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ವಿಮರ್ಶೆ ಕನ್ನಡದಲ್ಲಿ ಮತ್ತೊಂದಿಲ್ಲ.

**೨೨ ದರ್ಶನಗಳು :** ಲೇಖಕರು. ವಿ. ಟಿ. ತಿರುನಾರಾಯಣ ಐಯಂಗಾರ್, ಎಂ. ಎ. ಪುಟಗಳು ೯೨

| | |
|---|---|
| ಬೆಲೆ : ಸಾಧಾರಣ ಪ್ರತಿ | ೦ ೧೦ ೦ |
| ಕ್ಯಾಲಿಕೊ ಪ್ರತಿ | ೧ ೪ ೦ |

It gives in simple kannada the essence of Indian Philosophy, and ... will serve as a very good first Introduction to the study of this important subject.

— *Prof. M. Hiriyanna*

**೨೩ ಮೃಚ್ಛಕಟಿಕ ಪ್ರಕರಣ :** ಲೇಖಕರು. ಎಚ್. ಎಂ. ಶಂಕರನಾರಾಯಣರಾವ್, ಎಂ. ಎ., ಪುಟಗಳು ೧೪೪

| | |
|---|---|
| ಬೆಲೆ : ಸಾಧಾರಣ ಪ್ರತಿ | ೧ ೦ ೦ |
| ಉತ್ತಮ ಪ್ರತಿ | ೨ ೦ ೦ |

ಶೂದ್ರಕಕವಿಯ ಪ್ರಕರಣದ ಸಮಗ್ರಪರಿಚಯ ಈ ಗ್ರಂಥದಲ್ಲಿ ದೊರಕುತ್ತದೆ.

**೨೪ ಅಮರನಾಥಯಾತ್ರೆ :** ಲೇಖಕರು: ಸ್ವಾಮಿ ಸೋಮನಾಥಾನಂದ ಪುಟಗಳು ೭೮. ಬೆಲೆ ೧ ೦ ೦

ಚಿತ್ರಗಳಿಂದ ಕೂಡಿರುವ ಈ ಗ್ರಂಥದಲ್ಲಿ ವರ್ಣಿತವಾಗಿರುವ ವಿಷಯ ಅತ್ಯಂತ ರಮ್ಯವಾಗಿದೆ.

**೨೫ ಬಸವ ದೇವರಾಜ ರಗಳೆ :** ಟಿ. ಎಸ್. ವೆಂಕಣ್ಣಯ್ಯ ಬೆಲೆ ೨ ೦ ೦

**೨೬ ಪ್ರಾಚೀನಸಾಹಿತ್ಯ:** ಟಿ. ಎಸ್. ವೆಂಕಣ್ಣಯ್ಯ

ಕವಿವರ್ಯ ರವೀಂದ್ರನಾಥಠಾಕೂರರ ವಿಮರ್ಶೆಗಳ ಕನ್ನಡ ಭಾಷಾಂತರ ಬೆಲೆ: ೧ ೮ ೦

**೨೭ ಮುರಿದ ಮದುವೆ:** ಜಿ. ವೆಂಕಟಯ್ಯ, ಬೆಲೆ ೧ ೦ ೦

ವಿವರಗಳಿಗೆ ಬರೆಯಿರಿ—

ಎಚ್.ಎಂ. ಶಂಕರನಾರಾಯಣರಾವ್, ಎಂ.ಎ.

೧೪೦೬ ಕೃಷ್ಣಮೂರ್ತಿಪುರಂ, ಮೈಸೂರು.

---

# ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳ ಕೃತಿಗಳು

## ವಚನ ಭಾರತ

ವ್ಯಾಸಮಹರ್ಷಿಗಳ ಮಹಾಭಾರತದ ಹದಿನೆಂಟು ಪರ್ವಗಳ ಕಥೆ, ಅದರ ಸಾಹಿತ್ಯದ ಸೊಗಸು, ಧರ್ಮ, ನೀತಿ ಇವೆಲ್ಲ ಒಂದೇ ನೋಟದಲ್ಲಿ ಸರಳ ಸುಂದರವಾದ ತಿಳಿಗನ್ನಡ ಗದ್ಯದಲ್ಲಿ ಇಲ್ಲಿ ದೊರಕುತ್ತದೆ. ವಿದ್ವತ್ ಪೂರ್ಣವಾದ ಮುನ್ನುಡಿ, ದಪ್ಪರಟ್ಟು, ರಕ್ಷಾಕವಚ, ಚಿತ್ರಗಳು ಮತ್ತು ಸುಂದರವಾದ ಮುದ್ರಣದಿಂದ ಈ ಗ್ರಂಥ ಶೋಭಿಸುತ್ತಿದೆ.

....not merely very instructive but also deeply interesting to kannada readers, particularly to women and children.

*Prof M Hiriyanna*

It is in one word, the Golden Book of Bharata. — *Sri M.Govimda Pai*

ಸಾಧಾರಣ ಪ್ರತಿ ೫-೦-೦ ಅಂಚೆ ವೆಚ್ಚ ೦- -೦ ಉತ್ತಮ ಪ್ರತಿ ೬-೮-೦

## ಭಾಸಕವಿ

ಸಂಸ್ಕೃತಸಾಹಿತ್ಯದಲ್ಲಿ ಪ್ರಸಿದ್ಧ ನಾಟಕಕಾರನಾದ ಭಾಸನ ಹದಿಮೂರು ನಾಟಕಗಳನ್ನು ಕುರಿತ ಅತ್ಯುತ್ತಮವಾದ ವಿಮರ್ಶೆಯ ಗ್ರಂಥ